ಚರೆಂದೆಂಬನಾಣ್ನುಡಿಗಿದೇ ತಥ್ಯವೆನಲು ||೭೧|| ಮತ್ತೋರ್ವಸು
ದತಿ ಬೆಳ್ಳಿಯಬಟ್ಟಲೊಳ್ತಂಬಿ । ದುತ್ತಮಮಧುದ್ರವವನೀಂಟುತಿ
ರೆ ಕನ್ನೆವಂ । ದತ್ತ ಬೆನ್ನಂ ಮುಸುಕಿ ಪೊರೆವಾರು ಗಿಳಿದನಿಡು ಜಡೆ ಚಂ
ದ್ರಮಂಡಲವನು ॥ ಅತ್ತಿತ್ತ ಮಿಡುಕಲೀಯದೆ ಕಚ್ಚಿ ಧರೆಗೆ ತಂ । ದತ್ತೊ
ಸೊಭಾರ್ನನು ಮೆಂಬಂತೈದೆ ಸಂಶಯಮ । ನಿತ್ತ ದೀಮಧುಪಾಕ್ರಿಯಂ
ಮೇಳಿಸಿನಿಪ್ಪಂಕಿಳ್ಮಾಡದೇಂಬಿಡುವದೆ ||೭೨|| ತೇಗಿದೊಡೆಮ
ದ್ಯಪಾನದಗಂಧ ಪೊಲ್ಲಗೆ । ಮೂಗುಬ್ಬಸಂಪಡೆ ಕುಡಿದ ಮಧುರಸ
ಮುಕ್ಕಿ । ಮೇಗೆಸುರಿಯಲ್ತತ್ತ ದಿಗ್ಭಿಮಿತ್ತೊಂಗು ಘೋಯೆಂದು ಜೋ
ಗುಳ ಮಾಡುತ ॥ ತೂಗುತೇಳುತ್ತ ಬೀಳುತ್ತಳುತ ನಗುತ ತಲೆ । ವೋ
ಗೆಬಿದ್ದುದು ಕಪ್ಪೆಯೆಂದು ನಾಯ್ಗರಗಿ ಹೋ । ಜೋಗವ್ವ ಬಾಳು ಬಾ
ಳೆನು ತಲೋರ್ವಳ್ಕುಡುಚಿ ಸೂಳೆಯಾಡುತಿರ್ದಳು ||೭೩|| ಮುಸುಕಿ
ರವಕೆಯೊಳಡಸಿ ಜೋಲ್ದ ಪೆರ್ಮೊಲೆಗಳಂ ॥ ಬಸುರ ಸಾರಿದ ಮೊಲೆಗಳೆ
ನ್ನೆಲ್ವ ಮೊಲೆಗಳಂ । ಪಸರಿಸುತ ಬಯಲಬೇಟಂಗಳಂ ತನ್ನ ಹರೆಯದ
ನಲ್ಲನೊಡನೆನಕ್ಕು ॥ ನಸೆಮಾಡುತಂ ಸಿಂಗಗಕ್ಕೆ ಮನ ಮೆಳಸಿನಂ । ಹ
ಸು ತೆರಸ ಮರತ ಮೊಗಮಂ ಬೀತ ಕಾಮುಮಂ । ಹಸಗೆಯ್ವೆ ಸೆಂಬಮ
ವದುಜಟ್ಟಗದ ಲೋಲೆಯ ದ್ಮರದರದನೇಂ ವೇಳ್ವೆನು ॥ ೭೪ ॥ ಬತ್ತಿರ್ದ
ಮೊಲೆಯು ಕುಪ್ಪಸದೊಳಿರುವೆಯು ಚಂಡ । ನೊತ್ತಿ ಬಿಗಿಗುಂಚಾಡಿಬಿ
ಸುಟೆಲೆಯ ಘಳಿಗೆಯಂ । ಸುತ್ತಿ ಸುಕ್ಕುಗ್ಟಣಲೊಳಡಸಿ ನರೆದಲೆಗೆ ಮಸಿ
ದೊಡೆದು ತೆರೆಗೊಂಡೊಡಲನು ॥ ಕತ್ತಲೆಯ ಮರೆಗೈದು ಬೋಡುವಾ
ಯಿಂದಲೂ । ಳುತ್ತ ತನ್ನಿಷ್ಟ ಬಂದಂತೆ ನಾಯ್ಕಗೆ ಕೆಂದೂ । ಡಿತ್ತ ಬಾ ಜಾ
ಣಯೆಂಬಾ ಹಣ್ಣಮುದುಕಿ ಸೂಳೆಯು ರೆಸದರೇ ಸೆಂಬೆನು ||೭೫|| ಹಂ
ಜಿಗುಕ್ಕಯೊಳೆಸವ ಮೊಗದೊಳಾ ಬೋಡನಾ । ಯಿಂಜೋಲ್ಗ ಸುಧಿ
ಯೆ ತಲೆನಡುಗೆ ಸುಕ್ಕ ಪಪ್ಪ್ಯಯೊ । ಳಂಜಗುಳ್ದುಡು ಪನೆತ್ತ ತಮೂ
ಠುಗೋಲ್ವಿಡಿದು ತಡವರಿಸಿ ನಡವಮುದಕಂ ॥ ಕಂಜಮುಖಿಯೋರ್ವ
ಳಂ ಕಂಡು ಬೆನೆಗೊಂಡು ತಾ । ನುಂಜಗಲಿಯೆ ಡೆಗೆನಡೆದೊತ್ತೆಯಂ ಕೇ
ಳುತಿ । ರ್ದಂಜಗದೊಳೆಂತಪ್ಪರಂ ಮನಸಿಜಂ ಮರುಳ್ಮಾಡದಗಲ್ದ ದೆವಾ
ಣ್ಬನೆ ||೭೬|| ಮುಂತೆ ಬಧಲಾಗಳಾ ಶಿವಭಕ್ತ ಸೂಳೆಯರ । ಸಂತತಿಗ
ಳಂ ತಮ್ಮ ಮಿಂಡ ಜಂಗಮರೊಡನೆ । ನಂತಸಂಖ್ಯಂಗಳಿಂದಿರುತಿರ್ದ್ದ ಬ
ಳಿಕ ಶಿವಪೂಜೆಯ ಮಾಡುತಿರಲು ॥ ಅಂತಾಗಲಾ ಶಂಖ ಜಯಘಂಟೆ
ಮೊದಲಾದ । ನಂತವಾದ್ಯಂಗಳನಿನಾದಮಂ ಕೇಳುತತಿ । ಸಂತೋಷ
ದಿಂ ವಾಗಸಖಿಗ ಸಮ್ಮೇಳ ಬಂದೈದಿದಂ ಸಂಭ್ರಮದೊಳು ||೭೭|| ಈತೆ

ರದೊಳಾವಿಟವಿಟೀಜನದೊಳುಳ್ಳನಿತು।ಜಾತಿಲಕ್ಷಣಗಳಂನೋಡು
ತ್ತೈತರೆದಿನಪೆ। ಭೀತಿಯಿಂದೋಡುವನಿಶಾಂಗನೆಯ ಚರಣನೂಪುರ
ದರವಮಂಬಂತಿರೆ॥ಓತಪ್ಪಿದರಸಗೆಲ್ಬವಸೂಳೆಯರದುಷ್ಟ। ಮಾತೆ
ಯರಕೂರವಾಕಂತಲ್ಲಿಗಲ್ಲಿಪ್ರ। ಭಾತಸಮಯದಕೋಳಿಗಳ್ಕುಕ್ಕೂ
ಎಂದುಕೂಗುತಿರ್ದ್ದವುಕ್ರಮದೊಳು ॥೭೯॥ ತುಂಬಿಗಳಿಗೌತಣಮನೆ
ಚ್ಚರಿಸಿಚಕ್ರಕು। ಟುಂಬಕ್ಕೆ ರತಿಯೊಸಗೆಯಂಪೇಳ್ದವಾತಾಯು।ಸಂ
ಬೊಕ್ಕ ಸುರತಮೂರ್ಛಿತರನೆಬ್ಬಿಸಿತಾಂವ್ರಚೂಡಜಿಹ್ವೆಯನಲು
ಗಿಸಿ॥ ಅಂಬುಜಕೆಮಿತ್ರಾಗಮವನುಸುರಿಕೈರವಕೆ। ದಂಬಕಳೆಲುರಿ
ಯನೆಬ್ಬಿಸಿನಾಡೆಸೈತ್ಯರೂ । ಪಂಬಂದುತೀಡಿದುದುರವಿಯುದಯ
ಕಾರಣಸಮೀರಣಂತಕ್ಷಣದೊಳು ॥೮೦॥ ಅನಿತರೊಳಗನಿಲಹತಿ
ಯಿಂದಂಬುಜಕೆನೆಗದ । ವನಧಿಮಧ್ಯದಬಟ್ಟತಪ್ಪಮುತ್ತಿನಚಿಪ್ಪೊ।
ಅನಿಮಿಷಾಪಗೆಯೊಳಿರುಳಿನಮಂಜು ಸೋಂಕಬಾಡದಪುಂಡರೀಕ
ದಲರೊ ॥ ತನಿಜೊನ್ನಸಾಲನೀಂಟುವಪಥದೊಳಗುಮುತ್ತೆ। ಮನ
ದೊಳಂಕಂಪಿತೋರುವಹಂಸಮರಿಯೊಪೇ । ಳೆನಲೆಸದುದಸ್ತಾದ್ರಿ
ಯೋಳ್ಬಂದ್ರಮಂಡಲಂಮುನ್ನಿಸರಾಗಮದೊಳು॥೮೧॥ ಆಸಮಯ
ದೊಳುಬಿಜ್ಜಳಂಸಖರಕೂ । ಡಿಸುವಿಲಾಸದಿಂದಲ್ಲಿರದೆತಿರುಗಿತನ್ನ
ಯನಿಜನಿ । ವಾಸಕ್ಕೆ ಬಂದುಸಖರರಕಳುಪಲಾಕ್ಷಣ ದೊಳಿನನು
ದಯವಾಗಲತ್ತ॥ಲೇಸಾಗಿಮಶವಲಕ್ಷದಮೇಲೆತ್ತೊಂಬತಾ । ರ್ಸಾಸಿ
ರಮಹಾಜಂಗಮಕ್ಕೆ ಮೃಷ್ಟಾನ್ನಮಂ।ದಾಸೋಹಮಮ್ಮಾಡುತಂಬ
ಸವನುಂಚನ್ನಬಸವನುಂಸುಖಮಿರ್ದರು ॥೮೨॥ ಇಂತೆಸವಚನ್ನ
ಬಸವೇಶನಪುರಾಣಮಂ । ಸಂತಸದಿಬರದವರ್ಗ್ಗೋದಿದರ್ಗರ್ಥವಾ।
ದ್ಯಂತಮಂಬಿಡದೆಪೇಳ್ದರ್ಗೆಪಠಿಸಿದವರ್ಗ್ಗೆಭಕ್ತಿಯಿಂಕೇಳ್ದವರ್ಗೆ ॥
ಸಂತತಂಸಕಲಸುಖಮಂಸಕಲಭೋಗಮನ । ನಂತಸೌಭಾಗ್ಯಮಂ
ಕೊಟ್ಟುರಕ್ಷಿಸುವನಾ । ಕಂತುನಪರಾವತಾರನೆನಿಸುವಚನ್ನಬಸ
ವೇಶನಲ್ಕರಿಂದಂ ... ... ... ... ॥೮೩॥

ಅಂತು ಸಂಧಿ ೧೦ಕ್ಕೆ ಪದ ೪೩೪ಕ್ಕೆ ಮಂಗಳಂ.

## ೧೧ನೇ ಸಂಧಿ.

ಸೂಚನೆ॥ ಎಸೆವಕಲ್ಯಾಣಪುರವಳಯದೈಶ್ವರ್ಯವಂ।ವ
ಸೆದುನಿಟ್ಟಿಸುತೆಪ್ರಭುಸಿದ್ಧರಾಮನಕೂಡೆ । ಬಸವನಮಹಾ
ಗೃಹಕೆಬಂದುಪೂಜೆಯ ಕೊಂಡುಶಿವಗೋಷ್ಠಿಯಿಂದಿರ್ದನು॥

ಪದ॥ ಪಾವಕೇಂದ್ವರ್ಕನೇತ್ರಾವಳೀರವ್ಯರಾ । ಜೀವಭವ

ಹರಿವಂಶಮುಖ್ಯದೇವಸಂತಾನಸಂ। ಭಾವನಾಪೂರ್ವಕಕೃಪಾವಲೋ
ಕನಲಸತ್ಪಾವನಚರಿತ್ರಜಯುತಂ॥ ದೇವೀಮುಖಾಂಭೋಜಭಾವ
ಣ್ಯರುಚಿಮುದಿತ। ಭಾವನತರಕ್ಷಪ್ರಭಾವಸಲಹೊಲ್ದಪಂ। ಪಾವ
ರವಿರೂಪಾಕ್ಷದೇವಸುರನಿಕರಸಂಜೀವಭಕ್ತವ್ರಜವನು ॥೧॥ ಅತ್ತ
ಲಾಪೆಭುಸಿದ್ಧರಾಮಂಗೆ ಹಿಂಗದವು। ಹತ್ತನರುಹಿಸಿಕೊಡುವೆನೆಂದು
ಕಲ್ಯಾಣದೊಳ। ಗುತ್ತಮಶಿವಾಚಾರಿಚನ್ನಬಸವಂಬಸವನಿರಲವ
ರಬಳಿಗಾತನಂ॥ ಚಿತ್ತಹರುಷದೊಳ್ಕರತರುತಿರಲ್ಕಂದೆತ್ತೋ। ರಿ
ತ್ತುಸುಕೃತದಬೀಡುಸಿಂಗರದಜೋಡುಸ।ದ್ಭಕ್ತಿಯಹಗೂಡುಸೊ
ಗಸುವನಾಡುನೋಡುತವರಡಿಯುಟ್ಟುಬರುತಿರ್ದರು ॥೨॥ ಎತ್ತ
ನೋಡಿದೊಡೆನಿಗಮಂಗಳಿಂಪೊಂಗಳಿಂ। ದೆತ್ತನೋಡಿದೊಡೆಗಾಮಂ
ಗಳಿಂಪೇಗಳಿಂ। ದೆತ್ತನೋಡಿದಡೆನಗರಾಳಿಯಿಂಶಾಳಿಯಿಂದ್ರೋಣಾ
ಮುಖಂಗಳಿಂದಂ॥ ಎತ್ತಲುಂಪತ್ತನಸಮಾಜದಿಂಭೂಜದಿಂ। ದೆತ್ತಲುಂ
ಖರ್ವಡನಿಕಾಯದಿಂಗೇಯದಿಂ। ದೆತ್ತಲ್ಕಡಂಬಿದಸಘೋಡದಿಂಖೇಡ
ದಿಂದಾನಾಡೆಸಿರಿಮೆರದುದು॥೩॥ ಅಲ್ಲಿಗಲ್ಲಿಗೆಬೆಳದಬೆಳೆಗಳಿಂಮಳೆಗ
ಳಿಂ। ದಲ್ಲಿಗಲ್ಲಿಗೆನೆರದತಳೆಗಳಿಂಕೊಳಗಳಿಂ। ದಲ್ಲಿಗಲ್ಲಿಗೆರಂನದರೆಗಳಿಂಕೆ
ರೆಗಳಿಂಪರಿವಕಾವಲೆಗಳಿಂದಂ॥ ಅಲ್ಲಿಗಲ್ಲಿಗೆತೋರ್ಪಗಿರಿಗಳಿಂಕರಿಗಳಿಂ।
ದಲ್ಲಿಗಲ್ಲಿಗೆನೆರದಶುಕಗಳಿಂಪಿಕಗಳಿಂ। ದಲ್ಲಿಗಲ್ಲಿಗೆಗವಾಸ್ಪದಗಳಿಂನದಗ
ಳಿಂದಾದೇಶವೊಪ್ಪಿರ್ದುದು ॥೪॥ ಕಂಜಕುಮುದಂಗಳಿಲ್ಲಗಸರಂಸರ
ದಿಂದ। ರಂಜಿಸದಶುಕಪಿಕಂಶುಕಪಿಕಂಗಳಿಗೆಫಲ। ಮಂಜರಿಯನೀ
ಯದಿಹಮಾವುಮಾವುಗಳೆನಪ್ಪದಬಳ್ಳಿಬಳ್ಳಿಗಳೊಳು॥ ಮಂಜುಳಧ್ವ
ನಿಗೊಡದಪರಮೆಪರಮೆಗೆಸಂತ। ಸಂಜನಿಸದರಲರಲನವಪರಿಮ
ಳಂಗಳಿಂ। ದಂಪಡಿಯದೆಳೆಗಾಳಿಯೆಳೆಗಾಳಿಯಿಲ್ಲದಿಹಬನವಿಲ್ಲನಾ
ನಾಡೊಳು ॥೫॥ ಒರೆಯದರಸಂಗಳಂಚಂದ್ರಕಾಂತಂಗಳಿಂ। ಮೆರೆಯ
ದಧರಂಗಳಂಕಿವಿಗಮೃತಪೂರಮಂ। ಕರೆಯದಸೊರಂಗಳಂದುರ್ನೀ
ತಿದುರ್ಮಾರ್ಗದುಷ್ಕೀರ್ತಿಸಂತತಿಯನು ॥ ತೊರೆಯದಹನಂಗಳಂ
ಸುರಪುರೋದ್ಯಾನಮಂ। ಜರೆಯದಬನಂಗಳಂಜಾತಿವೈರಂಗಳಂ। ಮ
ರೆಯದಮೃಗಂಗಳಂಕಾಣೆನಾದೇಶದೊಳಗೇನೆಂಬೆನಚ್ಚರಿಯನು ॥
ಸುರರಸಭೆಯೊಲುಸುಧರ್ಮಾಧಿಷ್ಠಿತಂನಾಡೆ। ತರಣಿಮಂಡಲದಂತೆ
ಗೋಸಮೂಹಾನ್ವಿತಂ। ತರುಣೀಸ್ತನದ್ವಂದ್ವದಂತಗ್ರಹಾರಮಾಲಾ
ಲಂಕೃತಂನೋಳ್ಪೊಡೆ॥ ಸರಸಿಯೊಳ್ಪದ್ಮಾಲಯಂವತ್ಸರಂಗಳಂ।
ತಿರೆಯುಕ್ತಬಹುಧಾನ್ಯಮೆಸವಗಂಧರ್ವರಂ। ತುರುತರೋದ್ಯಾನ

ಶೋಭಾವಾಸವಿಂದಮಾನಾಡೆಸಿರಿಕೆರೆವೊಸೆದುದು॥೭॥ ದೇವಮಾತೃ
ಕನದೀಮಾತೃಕದೊಳಂಬೆಳೆವ। ದಾವಚೋದ್ಯಂಗಳಿಕದ್ಯಂಕಿದೊ
ಡೆಬಿಕ್ಕಿನಿದು। ಮಾವಂಣತೆನಿರಸದಕಾಲ್ಗಳಿಂಬೆಳೆವವಾಗಾಳಿಯಲೆ
ದೋಸರಿಸುವತೀವಿದೆಳೆನೀರಕಬ್ಬಿನಸಾರದಿಂಬೆಳೆವ। ವಾವಗಂಪಾ
ಮರೀಮುಖಶಶಿಗೊಸೆಸ್ವಿಂದು। ಗಾವನಿರ್ಮಳಜಲದಪೂರದಿಂಬೆಳೆವ
ತಿಹಶಾಲಿಗಳ್ಸಗ್ಗಿಸಗವು॥೮॥ ಶಾಲಿಗೆರಗಿದಗಿಳಿಗಳಂಸೋವಪಾಮ
ರೀ। ಜಾಲದೊಂದುಲಿಪ್ರುಮಂಕೋಕಿಲನಿನಾದಮಂ। ದೇಳಿದಂಗೈದು
ತೊಲಗದೆನಿಂದಕೀರಾಳಿಕಂಗೊಳಿಸಿತೇನೆಂಬೆನು॥ ಭೂಲಲನೆಗಾಕ
ಳೆವೆಪಸವ್ರೋಸ್ತವಕ್ಕಸಂ। ಮೇಳಿಸಿದಕಂಪುಗೂಡಿದತೂಸುರುಪಕ್ಕಿ
ಯವಿ। ಶಾಲವಸದಮುಸುಕಿದೆಂಬಿನಂಕಂಗೆಸದುದೇನೆಂಬೆನಕ್ಷರಿ
ಯನು॥೯॥ ಪಲವ್ಕಾಲಂಬೆಳೆವಿದೇಂಘಲಂಕಡೆಯಲ್ಲಿ। ತಲೆಗೊಯ್ಸಿ
ಕೊಂಬುದೆಂದುಂಬಿಡದೆನುತೆನಾಂಚಿ। ತಲೆವಾಗಿದಪ್ರೊಪೃತ್ರವೋಹ
ದಿಂಪ್ರತಿದಿನಂತನ್ನನೋವಂನೋಡದೆ। ಸಲಹುವಿಭೂದೇವಿಗಂನಮಿ
ಸಿಭಕ್ತಿಯಿಂ। ನಲಿದುಬಾಗಿದಪ್ರೊಪೇಳೆಂಬಿನಂಕಿಕ್ಕಿರಿದ। ಫಲಭಾರ
ದಿಂಕೊರಳ್ವಾಗಿಕಂಗೊಳಿಸಿರ್ದಶಾಲಿಗಳ್ತರವೊಸೆದವು॥೧೦॥ ತುಂಡು
ತುಂಡಾಗಿಕತ್ತರಿಸಿಗಾಣದೊಳೆರದು। ಹಿಂಡಿರಸಮಂತೆಗದುಕಾಸಿ
ಕಾಲ್ಸಳಿತದಿಂ। ಖಂಡಶರ್ಕರೆಯಾದವೇಗ್ಯದೊಡಂಸುಗುಣಮಂಬಿಡ
ದಸುಜನರಂತೆ॥ ಹಿಂಡುರುಳ್ದಿದವಾಳ್ದಗಿಬಿರಾದರಂಸುಕೋ। ದಂಡ
ರೂಪಿಂಸ್ವಾಮಿಹತಕಿನ್ನಿತಂಮೊಳು। ಗ್ಗಂಪತೆಯಬಿರಿದೆತ್ತಿತೆನೆ
ಸೋಗೆವಸುರಕಬ್ಬಿನತೋಟ್ಟಕಗ್ಗಿಸದುದು॥೧೧॥ ಬೆಳೆದಸಾನಾಶಾ
ಲಿಗದ್ದೆಗಳಪಾಳಿಗಳೊ। ಳುಲಿವಕೀರಾಳಿಸುಳಿಗಾಳಿಯುಂಕೆದರೊ
ಪ್ರಾ। ಗಳಧೂಳಿಪಾಡುವಮದಾಳಿಸತತಂಪಾಮುರಿಯರೋಳಿಸಲೆ
ಬಳೆಸಿದ॥ ತೊಳೆಗುವವನಾಳಿಯೊಳ್ವಟಕೀಳಿಮತ್ತಕೋ। ಕಿಳೆಕೀರ
ಸಂತಾಳಿಯಂಕಾಣುತಸ್ತ್ರರನ। ಬಲುದಾಳಿಯೆಂದುಪಾಂಥಕಾನಲು
ಗಟ್ಟಿನಿಂದಿರೆನೋಡುತ್ತೈತಂದರು॥೧೨॥ ಸುರಿದಶಾಲ್ಯನ್ನರಾಸಿಗಳೆ
ಪೃತಪೂರಿತದ। ಹರವಿಗಳೆಸೂಪಾದಿಶಾಕಸಂತತಿಯ ಪರಿ। ಪರಿಯ
ಪಕ್ಷಡಿಯುಪ್ಪುಗಾಯ್ಭಕ್ಷ್ಯಪರಮಾನ್ನಬಹುವಿಧದಶಿಖರಣೆಯ॥ ಧ
ರಘರದದಧಿದುಗ್ಧತಕ್ರದಿಂಪುದಿದಕೊ। ಪ್ಪರಿಗೆಗಳನುಂಡುಂಡುಪೋ
ಪನಡೆತಪ್ಪಪಥಿ। ಕರನೆರವಿಗಳೆಸತ್ರದಾಲಯಂರಂಜಸಿದುದಾಪಥ
ದೊಳೇನೆಂಬೆನು॥೧೩॥ ಕಳೆಶಂಗಳೆತ್ತಿನೀರೆರೆವಕಾಂತೆಯರಪೊಂ
ಗಳೆಸಸ್ತನಂಗಳಂಮಂಗಳೆಮುಖಂಗಳಂ। ತಳಿರತುಟಗಳೆಮುದ್ದುನಗೆ

ಗಳಂಕಂಡು ನಡೆಯಲ್ಕಂದೆ ಕಾಲೇಳದೆ॥ ಬಳಲಿಕೆಯನಾರಿಸುವ ನೆಳ
ದೊಳಲ್ಲಲ್ಲಿ ಸವೆ। ದಿಳಿಸಿರ್ದಗಂಡು ಬೊಂಬೆಗಳಂತೆ ಪಥಿಕಸಂ। ಕುಳಿ
ಮಿರ್ದುದರವಟ್ಟಿಗೆಯ ನೆಳಲನಾರಿಸುಬಸಂತಸದೊಳೇನೆಂಬೆನು॥೧೪॥
ನೀರನೀಂಟುವ ನೆವದೊಳಬಲೆಯರಲಲಿತಶೃಂ । ಗಾರರಸಸುಧೆಯ
ನಾಕಂಗಳಿಂದೀಂಟಸವಿ । ಸೋರುತಿಹವಾಗಮೃತಮಂ ಕರ್ಣದಿಂ
ದೀಂಟ ತಣಿಯದುರೆಕಂಣ ಮುಷ್ಟಿ॥ ಓರಂತೆ ಭಾವರತಿಸೌಖ್ಯಪಿಯೂ
ಷರಸ। ಧಾರೆಯಂ ಚಿತ್ತದಿಂದೀಂಟ ನೆರೆತಣಿದು ಬಾ । ಯಾರೆಸಾಕೆಸ
ದೆತಲೆದೊನೆದು ನೀರನ್ನಿಲಿಸುತಿಪ್ಪರಾ ಪಥಿಕರ್ಕಳ್ ॥೧೫॥ ಕರಕ
ಮಳಶಶಿಕಾಂತಕಳಶಮಾಸ್ಯೇಂದುವಿಂ। ಕರಗದಿಪ್ಪುದು ಚೋದ್ಯಮೆಂ
ದುದುಶ್ಟಿಂತೆಯಿಂ। ಕರಗುತಿದೆ ಸಿಂಹಮಧ್ಯಂಗಳಬುಜಾಕ್ಷಿಯರ ನೋ
ಟದೊಳ್ಪರಿದೆವೆಂಗು ॥ ಕರಿಕುಂಭಕುಚಯುಗಂಪೆಟ್ಟಿತಾವಿದಕಂ
ಡು। ಪರಿಹಾಸಕಂಮಾಳ್ಪ ತೆರದೊಳರವಟ್ಟಿಗೆಯ । ತರುಣೀಜನಂಗ
ಳಿರುತಿರೆ ಮುಂದೆಗೋಕುಲಂಕಂಗೆಕಡುಕಲ್ವಾದುದು॥೧೬॥ ತೋ
ರಬೋರಿಗಳಡುಲುಕಾರವಂಗಳದಘಂ। ಟಾರವಂ ಪಶುಗಳಂಭಾರವಂ
ಕರುಗಳಂ । ಭೇರವಂ ಕರೆವಘೋಭೋರ್ರವಂ ಮಂಥಾನದಾರವಂ
ಗೊಲ್ಲತಿಯರ॥ ಭೂರಿಭೂಷಾರವಂಕರುಗಳಂಕರೆವಗೋ। ಪಾರವಂ
ಮಾರ್ಮಲತುಪೋರ್ವ್ವ ಘನವೃಷಭಶೃಂ। ಗಾರವಂಗೂಡಿನಾನಾರವಂಕಿ
ವಿಗಳಂಪೂರೈಸಿತೇವೇಳ್ವೆನು ॥೧೭॥ ಮುನಿಯಂತೆ ಕರಿಯಂತೆ ಶಶಿ
ಯಂತೆ ಭಟನಂತೆ। ವನಕುಸುಮದಂತೆ ಯಿಶಾನವೈಭವದಂತೆ । ಘನ
ತರವ್ರತವಶಾರೋಹಿಣೀಧೇನುಸಂಸುರಭಿವೃಷಯುಕ್ತಮಾಗಿ ॥ ಅ
ನಿಮಿಷಾಲಯದಂತೆ ರವಿಯಂತೆ ಬಾಣಸದ । ಮನೆಯಂತೆ ಮಾಸಂಗ
ಳಂತತುಳಪಿಯೂಷ । ಘನತೆಗೋಮಯುವಲ್ಲಪಾಸ್ಪದಂ ವೈಶಾಖಶ
ಬ್ದದೋಳ್ವ್ರಜಮೆಸದುದು ॥೧೮॥ ಮುಂತೆಸದುದಾಗಳಾಘನವಿಷ
ವದಂಮುಕ್ತಿ। ಕಾಂತೆಯುರಮನೆಯಂತೆ ಪುಣ್ಯಾದಾಲಯದಂತೆ। ಸಂ
ತತಂಶೈವನೇಮದಕೋಶಗೃಹದಂತೆ ಧರೆಯ ಮುಖಕಮಲದಂತೆ॥
ತಿಂತಿಣಿಯೊಳೆಸವಸೌಧಂಗಳ ಮರೀಚಿಗಗ । ನಾಂತಮಂ ಚುಂಬಿಸ
ಲ್ಪಕಲಸೌಭಾಗ್ಯಮಂ। ತಾಂತಳೆದ ಪಟ್ಟಣಂ ಕಲ್ಯಾಣಮೆಸವಜಾಣ
ರತಾಣಮೊಪ್ಪಿರ್ದುದು॥೧೯॥ ಇಂತೆಸವಪಟ್ಟಣದಹೊರವಳಯದೊ
ಳುಲತಾ। ಸಂತತಿಗಳಿಂಕುಸುಮಶೋಭೆಯಿಂ ತರುಕುಲದ। ತಿಂತಿಣಿ
ಗಳಿಂಫಲಾನೀಕದಿಂ ತಳಿರ್ವನೆಗಳಿಂ ಸುಳಿವತಂಗಾಳಿಯಿಂ॥ ಮುಂತೆಸ
ವಶುಕಪಿಕಸಮೂಹದಿಂ ತುಂಬೆವಾ। ಡಿಂತಳೆರೊಹಂಸಾಳಿಯಿಂ ನಗರ

ದುಪವನಂ। ಕಂತುಸಂಜೀವನಂಪಾವನಂಪೆಂಪನಾಂತಾವಗಂ ಕಣ್ಗೆಸ
ದುದು॥೨೦॥ ಪೊಸತೆಂಗುಕೌಂಗುಹೇರಿಳೆಕಿತ್ತಿಳೆಗಳುಶೋ। ಭಿಸು
ವೆಂಚೆಕೊಂಚೆಪೂವಂಡುಗಿಳಿವಿಂಡುರಂ। ಜಿಸುವಕಾದಲರೆಲಸರ್ವಿ
ವಮಾವುಪೂವುಬಕುಳಮುಮುಕುಳವ್ರೊಪ್ಪುವಕೆಳಂ॥ ಮಿಸುಪನ
ೞನಂಪುಳಿನಮಂತುಂಬಿತುಂಬಿರಾ। ಜಿಸುವಶೋಕಂಕೋಕಮಾದಾ
ಡಿಮಂಹಿಮಂ। ದೆಸೆಗಂಪುಸೊಂಪುಪೆಂಪಿಂದೀಪುರೋಪವನಮುಸದಿ
ರ್ದ್ದುದೇನೆಂಬೆನು॥೨೧॥ ಸೋರ್ವ್ವರಸವಣ್ಗಳಿಂತಾಳ್ದಚೂತಂತುದಿಗೆ।
ಪರ್ವಿದೆಳೆವಳ್ಳಿಯಿಂದೆಸವಪೂಗಂನಾಡೆ। ಕೋರ್ವಿತಿಂತಿಣಿವಣ್ಗಳಿಂತೆ
ಕದಳಂಬೀಡೆವಣ್ಬಿರಿದದಾಡಿಮಚಯಂ। ಬೇರ್ವೆರಸಿತುದಿವರಂಕಾ
ತಪನಸಂಗಳೆಳೆ। ನಿರ್ವ್ಯಸಲುಮಂಕರೆವತೆಂಗುಕಿಸುವಣ್ಮುಸುಕಿ।
ತೋರ್ವ ನಾರಂಗಜಂಬೀರವಿನಿತುಂನಾಡೆಸೆವರ್ಕಾಲಂಕುಂಗವ॥
ನಾಗಲತೆಯಂಪೂಗವೃಕ್ಷಮಾಲಿಂಗಿಸಿದು। ದೀಗಳೀಚೂತಮಾಮಲ್ಲಿ
ಗೆಯುನಪ್ಪಿದುದು। ಬೇಗದೊಳ್ಕರವಕಂಮಾಧವಿಯತೆಕ್ಕೆಗೊಳ
ಗಾದುದಂತಾತಮಾಲಂ॥ ಪೋಗಿತಳಿತಸುಗೆಯಂವೇಷ್ಟಿಸಿದುದಂಕಂ
ಡು। ಭೋಗಿಸಂಕುಲಮಗ್ದ್ರಣೀಡಬೇಡೆಂದು। ಕೂಗಿಪರಾರುವ
ಮದನಕಹಳೆಯೆನೆಸರಗೆಯ್ವಕೋಗಿಲೆಗಳೆಸದಿರ್ದವು।೨೩॥ ಪೆಣ್ಗ
ಳಾಡುವತಳಿರ್ವನೆಗಳಿಂನನೆಗಳಿಂ। ಕಣ್ಗೊಳಿಪಕುಸುಮಿತಲತಾಳಿ
ಯಿಂಕೇಳಿಯಿಂ। ಜಾಣ್ಗಾಡಿವಡೆಗದಂಪತಿಗಳಿಂರತಿಗಳಿಂನವಿಮಚಕ್ರಂ
ಗಳಿಂದಂ॥ ಪೆಣ್ಗಳಂಸವಿವಗಿಳಿವಿಂಡಿನಿಂಬಂಡಿನಿಂ। ತಣ್ಗಾಳಿಯಿಂಪೊ
ರೆವಕಮಲದಿಂವಿಮಲದಿಂ। ದೆಣ್ದೆಸೆಗೆರಾಜಿಪಕೊಳಂಗಳಿಂಕಂಗಳಿಂ
ನೋಡೆಬನಮೆಸದಿರ್ದುದು।೨೪॥ ಪ್ರತಿದಿನಂಪಾದರಿಯರೋಳ್ಸ್ನೇ
ಹಮಧುಪವು। ಪ್ರಿತೆಯರೋಳ್ಪಿಂಗಿಯಾವನಮಿಗಂಸೋಂಕೆಸ।
ದ್ಗತಿಯಿಲ್ಲವೆಂದುರವಿತೊಲಗಿಕಿರಣಂಗಳಂಮುದುಡಿಪೋಪನೊಪೇ
ಳನೆ॥ ಮಿತಿಯಿಲ್ಲದಾಗಸಕೆಬೆಳೆದತರುಪತ್ರಸಂ। ತತಿಯಸಾಂದ್ರ
ತ್ವದಿಂಕತ್ತಲಿಸುತ್ತಿದೆಕುಸುಮ। ವಿತತಿಗಳಬೆಳಗಿಲ್ಲದಿರಲೊಳಗುಗಾ
ಣ್ಬದಜ್ಜರಿಯೆನುತೆನಡೆತಂದರು॥೨೫॥ ಸುರವನದೊಳಾಂಸುಡಿಸಿ
ಕೊಂಡನೇನಾಡೆದಶ। ಶಿರನವನದಂತೆಕಪಿಯಿಂಭಂಗವಡೆದನೇ। ನಿ
ಳುತಮಾಧನದವನದಂತೆರಾಕ್ಷಸರಕಾಲ್ದುಳಿತಕ್ಕೆಪಕ್ಕಾದೆನೆ॥ ಸರಿ
ಯೆಲೋಕದವನಂತನಗೆಂಬಪೇರ್ಮೆಯಿಂ। ಮೊರೆವತುಂಬಿಗಳಿಂದೆ
ಪರಪುಟ್ಟನಿಂದಬಿ। ತ್ತರಿಸಿಪಾಡಿಸಿಪೊಗಳಿವಂತೆಪುರಮಂಬಳಸಿದು
ಪವನಂಕಣ್ಗೆಸೆದುದು॥೨೬॥ ನವಿಲನಟಣೆಯೆನರ್ತನವಮ್ಮೊರೆವತುಂ

ಬಿಗಳ | ರವಮಾಗೀತಂಕೋಕಿಲಧ್ವನಿಯೆ ವಾದ್ಯವೆ | ಪ್ಪುವೆಮ
ರುತನಿಂಕೆದರೊಕು ಸುಮಂಗಳೆಸವಪ್ರಷ್ಪಾಂಜಲಿಗಳೆಂದವಾಗೆ‖ ನ
ವಪಾತ್ರಮುಂ ವಸಂತಂತಿಪ್ಪಿತೆಂದಂಗೆ| ಭವನವುಂ ದಾಡಿಸಲ್ಪವೆ ಬದರ್
ಸಲ್ಲಾಸ್ಯ| ಭವನದಂತೊಪ್ಪಿರ್ದುದು ಪೆವಸಂಜನಪದದಜನರಿಗಚ್ಚರಿ
ಯಾವುತ‖೧೭‖ ಪುರದಕೋಂಟೆ ಯುತೇನೆಯೊಳೆಲ್ಲಿಯುಂ ಕೀಲಿಸಿದ|
ವರಪದ್ಮರಾಗನೀಲಧ್ವಕಾಂತಿ ರಾಜಿಸುವ | ಮರಕತದಕಾಂತಿಮು
ತ್ತಿನಕಾಂತಿಯುನಿತುಮಾವನದೊಳಗೆ ಪಡಿಬಿಂಬಿಸಿ‖ ಸರಸಕಿಸಲಯ
ಚಯಂ ತುಂಬಿಗಳು ಶೋಭಿಸುವ | ತರುಪತ್ರತತಿ ಪುಷ್ಪಸಂದೋ
ಹಮುಪ್ಪುವೆಂ | ಬುರಶಂಕೆಯುಂ ಪ್ರಟ್ಟಿಸುವ ನಗರಮುಂ ಬಳಸಿದುಪವ
ನಂಚಲ್ಯಾದುದು ‖೧೮‖ ಇನಿತ್ಪ್ರದಿಂ ಮುಂದೆ ರಂಜಿಸಿರ್ಪೀನಗರ| ದ
ನುಪಮಶಿವಾರ್ಚನಾಪರಗಳೆ ಸುಶೀಲಕ | ತ್ಯಾನುಕೂಲಮಾದ ಕೆರೆ
ಬಾವಿಹೊಕ್ಕರಣೆ ದೀರ್ಘಿಕೆಕೊಳಂಪಳ್ಳಂಗಳು ‖ ತನತನಗೆ ನೇಮಿಸಿ
ಪ್ಪವುಲೆಕ್ಕಮಿಲ್ಲಮ್ | ಬನಗಳಿಗೆ ಗಣನೆ ಮೊದಲಿಲ್ಲವಾ ನಗರದಸು |
ಜನರದೇಂ ಧನ್ಯರೋ ಶಿವಶಿವಾ ಯುನುತಾಗ ಸೋಡುತ್ತೈತರುತಿರ್ದ
ರು ‖೧೯‖ ಆನೆಗಳನೇರಿ ದೆಸೆದೆಸೆಗೆ ನೂಂಕುವ ರಾಜ‖ ಸೂನುಗಳನು
ತ್ತಮಾಶ್ವಂಗಳಂತಿದ್ದುವನ| ಮೀನಕುಶಲದಸಾಣಿಕರನಂಕದೊಳಗೊ
ಬ್ಬರೊಬ್ಬರಂ ಮೂದಲಿಸುತ‖ ನಾನಾಯುಧಂಗಳಿಂದಂ ಪ್ರಹಾರಿಸುವ
ಸುಭಟಾನೀಕದಬ್ಬರದ ವಾದ್ಯರವದುಬ್ಬರದ| ನೂನಸಂಭ್ರಮದಿಂ
ದೆ ಕಲ್ಯಾಣಪಟ್ಟಣದ ಪೊರವಳ್ಳಿ ಮೆರೆದುದು ‖೨೦‖ ಪೊಳಲ ಪೌರ
ಗಣಸಿರಿಯನೀಕ್ಷಿಸುತ ಬರೆ ಮುಂದೆ| ಜಳಧಿ ಜಂಬೂದ್ವೀಪಮಂ ಬಳ
ಸಿದಂತೆ ಕಂ| ಗೊಳಿಸಿ ಪರಿವೇಷಮಾ ರವಿಬಿಂಬಮಂ ಬಳಸಿತೋರ್ಪಂತೆ
ಪೊಂಗೋಂಟೆಯು ‖ ಬಳಸಿಯುಗಳೊಪ್ಪುತಿಪ್ಪುದು ತನ್ನ ಘಾತಮಂ|
ತಿಳಿವರಾರೆಂದು ಮೂದಲಿಸಿ ಕರೆವಂತೆ ಸವ | ಜಲಪಕ್ಷಿಗಳ ಕಳದ್ವಾ
ನದಿಂ ಪಾಪುರದಗಳ್ಮೆರದುದೇನೆಂಬೆನು ‖೨೧‖ ನೀಲಂಗಳಿಂ ಸವೆದ ತೆ
ನೆತೆನೆಯು ನಡುವಣವಿ | ಶಾಲಂಗಳಂ ಕಂಡು ಬಾಯ್ಬಿರೆದ ಬಹುಮು
ಖದ | ಕಾಳೆರಾಹುವಿಡಂಬಶಂಕೆಯಿಂ ಕೋಂಟೆ ಯುಂ ಸೋಂಕದೆಡಬ
ಲಕೆ ಪೋಗೆ‖ ಮೇಲೆ ಏನ ಪಂದಕ್ಷಿಣೋತ್ತರಾಯಣವೆಂದು| ಪೇಳುವ
ಮರ್ನುಜರಂತಪ್ಪ ದೊಡ ಕಾರಣಂ | ಬಾಲಕರ್ ಶಿಾದೊಡೆಯುಮೂ
ರ ಮೇಲಣವಾರಿಯುಂ ಬಿಡುವರೇ ಧರೆಯೊಳು ‖೨೨‖ ಕನಕಾಚಲ
ದ ಮೇಲೆ ತರತರಂ ಬಿಡಿದೊಪ್ಪು | ವನಿಮಿಷವಿಮಾನಂಗಳುನ್ನತಪ್ರ
ಬೆಗಳಿಂ | ದೆನೆಪಳುಕಿನಿಂ ಸವೆದ ಮುಗಿಲಟ್ಟಳೆಯ ಸಾಲ್ಗಳೊಪ್ಪಿದವು

ಪೊಂಗೊಳೆಂಟೆಯು॥ತೆನೆವಸುವರ್ಣೆಳೆವಿಗೆಯುಕಾಂತಿಸುರ ನಿಮ್ನಗಾ
ತನುಯೋಗದಿಂಯುಮುನೆಗಂಗೆಯರಸಂಗಮಂ । ಜನಿಸಿತಾಗಸದೊ
ಳೇಸಾಕ್ಷ್ಯರ್ಯವೆಂಬಂತೆಕಾಣಿಸಿದುದೇಂಪ್ರೇಗಳ್ವೆನು ॥೩೩॥ ಇನಿ
ತುನ್ನತಂಬಡೆದಕೊಳೆಂಟೆನಾಲ್ವತ್ತೆಂಟು। ಘನಯೋಜನದಸುವಿಸ್ತೀ
ರ್ಣವಾಪಟ್ಟಣ । ಕ್ಕನುಪಮಿತನವರತ್ನಮಯುದಮುನ್ನೂರರುವ
ತೆಸವಪೆರ್ಬಾಗಿಲುಗಳು॥ ಮಿನುಪಕಶಿಸೂರ್ಯವೀಧಿಗಳೆಸೂರಿಪ್ಪ
ತ್ತು । ವಿನುತವಾದಖಿಳಸೌಭಾಗ್ಯಸಂಪದದಿಂದ । ಜನಪದವಿರಂಜಿ
ಸುವಕಲ್ಯಾಣಪಟ್ಟಣವನೊಳಪೊಕ್ಕುಬರುತಿರ್ದರು ॥೩೪॥ ಹೊಳೆ
ವನವರತ್ನದಾಳ್ವೇರಿಗಳಕೇರಿಗಳ । ಚಲಿಪಕನಕಧ್ವಜಪಟಾಳಿಗಳ
ಕೇಳಿಗಳ। ಬಳಿದಸೊದೆಗಳಸೌಧರಾಜಿಗಳವಾಜಿಗಳತರತರದನಿಳೆ
ಯುಂಗಳ॥ಸ್ಥಲಿಪೋಪಬಪ್ಪಬಲ್ಮನ್ನೆಯರಕನ್ನೆಯರ। ಸುಳಿಸುಳಿದು
ಕಣ್ಗೊಪ್ಪುವೆಂದಣದಗೊಂದಣದ । ಕಳಕಳದವಾದ್ಯರವದಬ್ಬರದನಿ
ಬ್ಬರದಲಾಪುರಂರಂಜಿಸಿದುದು॥೩೫॥ ಏಸುವೈಭವಮುಳ್ಳೊಡೇಂಫ
ಲಂಸಲೆಜಾತ। ವಾಸನುಮರೇಂದ್ರನಗರಮ್ಮಾಸವನಿಧಿಗ । ಳೇಸು
ಳ್ಳೊಡೇಂಫಲಮುದೇಕಪಿಂಗಳಸದನಮುಳೆಕಾಪುರಂಭಾವಿಸೆ ॥ ಏಸು
ಭೋಗಿಗಳುಳ್ಳೊಡೇಂಫಲಂವಿಷಧರಾ। ವಾಸಮಾಭೋಗಾವತೀಪುರ
ಮುದೆಂದಟ್ಟಿ। ಪಾಸಪಿಂಪುರವನಿತೆಜರೆವಳೆನೆಸೌಧಂಗಳೊಳ್ವೆಳಗುರಂ
ಜಿಸಿದುದು॥ ಇಕ್ಕೆಲದಬೀದಿಬೀಟಯೊಳಗ್ಲಿಗಲ್ಲಿಗಿ। ದಿಕ್ಕಕ್ಕೆಯಿಂಸ
ಕಲವಿಭವದಶಿವಾಲಯಂ। ಲಕ್ಕಮುಂಮೇಲೆತೊಂಬತ್ತಾರುಸಾವಿರ
ಮುಮಂತವಕೆಮುಖ್ಯವಾಗಿ॥ಮುಕ್ಕಣ್ಣವಲ್ಲಿತ್ರಿಪುರಾಂತಕಾಖ್ಯದೊ
ಳಿಹಂ। ಸೊಕ್ಕುಜವ್ವನೆಯರಾಡುವಹಬ್ಬರ್ದುರುಗಳ। ಹಕ್ಕೆಮೋ
ಹನದಿಕ್ಕೆಯೆನಿಪವೇಶ್ಯಾಶ್ರಯಂಮುಂದೆಕಡುಚಲ್ವಾದುದು॥೩೭॥
ವರಮೇನಕೆಯುಸೊಬಗುರಂಭೆಯವಿಲಾಸಮಾ। ಸುರಸೆಯಸುರೂ
ಪುಮುರ್ವಸಿಯಚಾತುರ್ಯಂಗ। ಳುರುಮಂಜುಘೋಷೆಯಸುಗಾನಂ
ಸುಕೇಶಿಯುನ್ನತಕೇಶಮಾನಗರದ ॥ ತರುಣಿಯುರಚರಣಸೇವೆಯ
ಮಾಳ್ಪಕೆಳದಿಯರ। ಘೊರೆಯೊಳೋಲೈಸಿಪರ್ಎನ್ನಿವರಗಾಡಿಯಂ।
ವಿರಚಿಸುವಡೆಳವಲ್ಲವೆಂದೆನಲುಪ್ಪರದವೇಶ್ಯಾಜನಂಕಣ್ಗೆಸದುದು ॥
ಮೆಲ್ಲಮೆಲ್ಲನೆಬೀದಿಯೊಳ್ನಡೆದುಬರ । ಎಲ್ಲಿಗಲ್ಲಿಗೆಸೋಳ್ಪರೆದೆಗ
ಳಂಮೋಹನದೆ । ಘಲ್ಲಘುಲ್ಲೆಂದೆನಿಪಬಟ್ಟಮೊಲಗಳಕಣ್ಗೆಕಾಣಿಸ
ದಬಡನಡುವಿನ ॥ ನಿಲ್ಲನಿಲ್ಲದನೋಟದಬಲೆಯುರ್ತಮುತಮ್ಮ। ಸೊ
ಲ್ಸಸೊಲ್ಸುಗಳೊಳಿನಿದೊಸರೆನಾನಾಕಲೆಯ । ಬಲ್ಲಬಲ್ಲಿವೆಯುರಂಗೆ

ಲ್ವಚಾತುರ್ಯಂಗಳೆಬಾಲೆಯರ್ಕಂಗೆಸೆದರು ||೩೯|| ಗಿಳಿಗಿನಿದುಮಾ
ತುಗಳಂಬರಿಸುತಂಗಂಡುಗೋ | ಗಿಲೆಗಳಸರಂಗಳಂತಿದ್ದುತಂಹಂಸೆಗ
ಳ್| ಗಲಸಗಮನಂಗಳಂತೋರುತಂಚಾಳ್ವಕ್ಕಿಗಳಿಗೆನೀತಿಯನುಸು
ರುತಂ॥ಗಳೆರವಂಗಳಕಪೋತಂಗಳ್ಗೆಕಲಿಸುತಂ| ತಳಿರುಯ್ಯಾಲಾಡು
ತಂಪಾಡುತಂನೋಡುತಂ| ಚೆಲುವೆಣ್ಗಳೆಸೆದಿರ್ದರಾಪಣ್ಯವೀದಿಯೊ
ಳದೇನೆಂದುಬಣ್ಣಿಸುವೆನು||೪೦||ಸುಯ್ಗೆಮರೊಳಕಂಪುಕಂಪಂಪಟ್ಟಿಸಲ್ಕೆ
ರಿದು| ವೈಗವಮರೊಳನುಂಪುನುಂಪೇರಿಸಲ್ಕಸುನಗೆಯ | ಬಾಯ್ಗವ
ರೊಳಸೊಂಪುಸೊಂಪಕೋರ್ವಿಸಲ್ಕಸುಮವಾಲೆಯಂಪಿಡಿದೆತ್ತಿದ|| ಕೈ
ಗವಮರೊಳಕಂಪುಕಂಪೊದವಿಸಲ್ಕಿಂಬಿದರ್| ಮೈಗಣೆಯನಿಂದುಮಾಜ
ಸಲೊಲಿದಜಯರವಂಯ | ತಾಯ್ಗರುವೆಬಹುರೂಪನಾಂತುದಿಗ್ವಿ
ಜಯಕ್ಕೈದುವಳೊಪೇಳೆನೆಸತಿಯರು ||೪೧|| ತಳಿರೊನೀರ್ವನಿಗಳೇ
ಪನ್ನೀದುಕಂಪಿಂಗೆ | ಬಳೆಸುವಳಿವಾಲಜಲದಾಳಿಕಣ್ದಿರ್ಗಳೆ| ತೊ
ಳೆಪಮಿಂಚವರಕರಕಂಕಣಧ್ವನಿವೊಳಗುವುಡಿಗಳಿಂದುದಿರಲರ್ಗ
ಳೆ || ಪೊಳೆವಾರಿಪೊರಲೆಸವಕುಂಕುಮಂಕಪ್ರರಂ | ಮಲಯಜಂಕ
ಸ್ತೂರಿಮಿಶ್ರವರ್ಣಂಸಮ| ಜ್ವಲಸುರಪಥನುವೆನಲ್ಕೆಗಾಲದಂತೆ
ಲ್ಲಿಘಟ್ಟಿವಳ್ತಿಯರೆಸೆದರು||೪೨|| ವೊಗದೊಳಂಮುಕ್ತರಿಪಶಶಿಕಳೆಗಳಂ
ಕಟ್ಟಿ | ಬಿಗಿದುಮಾರುವರೆನಲ್ತಾಂಬೂಲದೆಲೆಗಳಂ | ಮಿಗೆಮಾರು
ವಬಲೆಯರ್ಕಂಗೆಸೆದರಲ್ಲಲ್ಲಿಧರೆಯಕಮಳಂಗಳೆಲ್ಲ|| ನಗರವಧುಗಳ
ಪದತಳಂಗಳಂಸೇವಿಸಿರ| ಲಗಲಲಾರದೆಬಂದುಕಳೆಯೊಳಿಹವೆಂದುತೆ
ರ | ಣಗಳಬಿಂಬಗಳಿಹವೆನೆಕಂಚಗಾರಪಸರದಭಾಂಡಮೆಸೆದಿರ್ದ
ವು||೪೩|| ಅರುಣಾಂಗರಲ್ಲದಾರಾಜ್ಯದೊಳಗೆಲ್ಲಿಯುಂ| ಸರ್ವಾಂಗರಿ
ಲ್ಲದೊಡೆಯುಮಖಿಳವಸ್ತುಗಳು| ನೆರೆದಿರ್ಪವೇತಕೆಂದೆನಲಶ್ವದಂ
ತಿಗಳಕವಳಕಷ್ಟಸುಗಂಧಕೆ॥ ಪರಿಪರಿಯಚಿತ್ರಕುಶಲಂಗಳ್ಗೆಭೋಗಿ
ಗಳೆ| ಪರಮಭೋಗದ್ರವ್ಯಕೆಂಗಜಂಪಡೆದನೆನೆ| ಪರಿಶೋಭಿಸಿದವು,
ತತ್ಪುರದವೀದಿಗಳಲ್ಲಿಗಂಧಗರಪಸರಂಗಳು ||೪೪|| ಪರಿಕಿಪೊಡೆದೇವ
ದಾನವಮಾನವರ್ಗೆಯುಂ | ನಿರುತದಿಯಲಂಕಾರವಸ್ತುಗಳಿಗಾದಿ
ಯಾ| ಗಿರುತಿಪರ್ನಿರುಪಮಗುಣಂಗಳಂಮೊಡಲನಾಶ್ರಯಸರ್ಪವಂ,
ತಲ್ಲದೆ || ಪರಿಹರಿಸುವೆವ್ರಹುಮವನಾಗರ್ಯುಂನೆವ್ಮಂತೆ| ಧರೆಯೊ
ಳಗಪೆಣ್ಗಂಡುಗಳಲಜ್ಜೆಯುಂತಾಯ್ವು | ಪಿರಿಯತನವೆಲ್ಲಿಯುದೆನಿಪ್ಪ,
ಪೇರ್ವರ್ಯೆಯೊಳಲ್ಲಿಜವಳಿವಸರಗಳೆಸದವು ||೪೫|| ಹರಸಖನಪುರದ
ಧನವಿಮಾಪುರದಚಿನ್ನವರ| ದರೊಳೋರ್ವನೊರೆವಚಿನ್ನಕ್ಕೆಸರಿಬಾ

ಗದೆಂ। ಬರವಾತುಸಲ್ವಂತೆರಾಶಿಗೈದಿಪ್ಪಪೊಂಗಳ್ಗಂಗೆಶೋಭಿಸುತಿ
ರೆ ॥ ಪೆರಮುನಿಪನಬ್ಧಿಜಲಮೆಲ್ಲಮಂಪೀರತೆ । ಚ್ಟರದಿಪಾತ್ರೆಯೊಳಿ
ರ್ಪರತ್ನಸಂಚಯದಂತೆ । ಕರಮೊಪ್ಪಿತೋರ್ಪರತ್ನಂಗಳೊಟ್ಟಿಲ್ಗ
ಳುರೆಚೆಲ್ವಾದವೇನೆಂಬೆನು ॥೪೬॥ ಇಂತೆಸೆವಸಕಲವೆವಸಾರದಂಗ
ಡಿಗಳಂಸಂತಸದಿನೋಡುತ್ತೈತರೆಮುಂದೆಕಾಣಸಿತ । ನಂತಗಜಶಾ
ಲೆಹಯಶಾಲೆಯಾಯುಧಶಾಲೆಯಿಂಸಕಲಭಂಡಾರದಿಂ ॥ ಸಂತತಂ
ಪೊಗುವಪೊರಮಡುವಸಂದಣಿಪರಸು । ತಿಂತಿಣಿಗಳಿಂಭಟಾಗ್ರಣಿಗ
ಳಿಂಕವಿಗಮಕಿ । ಸಂತತಿಗಳಿಂದೆರಾಜಾಲಯಂಪುರವನಿತೆಯಮಳೆ
ಮುಖಬಿಂಬದಂತೆ ॥೪೭॥ ಅದರೊಳಿರ್ಪಂರೂಪಮದನನುಂಧನದ
ಸಮ । ಸುಧನನುಂವಿಭವಸುರಸದನನುಂನವಪದ್ಮ । ವದನನುಂ
ಸಿತಕುಂದರದನನುಂಜಿತಶತ್ರುಕದನನೆಂದೆನಿಸಿಮೆರವ ॥ ಉದಧಿ
ಗಂಭೀರನುಂಸೋಚಿಲೋದ್ಧಾರನುಂ । ಸದಮಳಶರೀರನುಂಸರ
ಸಗುಣಸಾರನುಂ । ಸುದತಿದೃಕ್ಕಜ್ಜಳಂಬಿಜ್ಜಳಂಸಕಲಸೌಭಾಗ್ಯದಿಂ
ದಿರುತಿರ್ದನು ॥ ೪೮ ॥ ಇಂತೆಸೆವಕಲ್ಯಾಣಪಟ್ಟಣದೊಳೊಪ್ಪುವಾ।
ದ್ಯಂತಸೌಭಾಗ್ಯಮಂ ನೋಡುತಡಿಯಿಟ್ಟುಬರೆ। ಮುಂತೆಸೆದುದ
ಮಳಭಕ್ತಿಯುತವದ್ಮನೆಯಂತೆಮುಕ್ತಿಯಿಹಸದನದಂತೆ॥ ಅಂತರಂ
ತರದಸೌಧಾವಳಿಯಬಾಗಿಲ್ಗೆ। ಳಿಂತೊಳಪಬಸವನರಮನೆಯದಂ
ಕಾಣುತ। ತತ್ಯಂತಹರುಷದೊಳಲ್ಲಮಪ್ರಭುವರಂ ಸಿದ್ಧರಾಮರುಂ
ನಡೆತಂದರು॥೪೯॥ ಬಂದುಬಸವನಮನೆಯಬಾಗಿಲೊಳ್ನಿಲೆಭಕ್ತಿ।
ಯಿಂದಾಗಳಡಪದಪ್ಪಣ್ಣತಾಂಕಾಣುತ್ತೆ । ತಂದಬಿಳಿಗಣನಿಕದೊಡ
ನೆಶಿವಪೂಜೆಯಂ ಮಾಳ್ಪಬಸವನಪೊರೆಯೊಳು॥ನಿಂದುಬಿನ್ನವಿಸಿ
ದನಪೂರ್ವಜಂಗಮಯುಗಂ । ಬಂದಿರ್ಪರದಕೊಬಾಗಿಲೊಳೆನಲ್ಕರ
ತಪ್ಪ। ದೆಂದುನೇಮಿಸೆಬಸವನಾಜ್ಞೆಯಿಂಮರಳಿಬಂದಲ್ಲಮನೊಳಿಂ
ತೆಂದನು॥೫೦॥ ಸ್ವಾಮಿಚಿತ್ತೈಸುನಿಮ್ಮಯಮಗಂಬಸವನತಿ।ಪ್ರೇ
ಮದಿಂದಂನಿಮ್ಮಪಾದವನುನಚ್ಚಿರ್ಪ। ನಾಮಗನರಕ್ಷಿಸೆನೆರಾಜಾಲ
ಯಕ್ಕಾವುಬಾರವೆನೆಮರಳಿಬಂದು । ಈಮಾತನೆಲ್ಲಮಂಪೇಳ್ವನಿತ
ರೊಳುಹೃದಯ।ತಾಮರಸದೊಳ್ತೊಳಿದುಚೆನ್ನಬಸವೇಶ್ವರಂ।ತಾಂ
ಮಹಾವೇಗದಿಂಬಂದುನಿಂದಾಬಸವರಾಜನೊಡನಿಂತೆಂದನು ॥೫೧॥
ಎಲೆಮರುಳೆಬಸವದಂಡಾಧೀಶನಿನ್ನಬಾ।ಗಿಲೊಳೈದೆಪಭುಸಿದ್ಧರಾ
ಮರೈತಂದಿರಲ್ತಿಳಿಯದಿಂತೊಳಗೆಮೈಮರೆದಹಂಕಾರದಿಂದಿಪ್ಪರೇ
ನೀನೆನಲ್ಕೆ ॥ ಬಳಿಕದಂಕೇಳ್ದುಧೃತಿಗುಂದಿಕರಿಕರಿಗಂದಿ। ಕಳವಳಿಸಿ

ಕಂಗೆಟ್ಟುಮುಂಮುಳಿಂಮರುಗುತ್ತೆ। ತಿಳಿದೆನಗೆಗತಿಯಾವುದೆಂದುಬಸ
ವಂಚನ್ನಬಸವಗಾನತನಾದನು॥೫೨॥ ಮಾನನಿಧಿಬಸವನಿನ್ನಯ
ಭಕ್ತಿಗೊಲಿದುಪಭು। ತಾನೈದಿಬಂದುಬಾರದೆಪೋಗಲರಿಯನಿದ।
ಕಾಣಿಪೆಂಸಂಚುಬೇಡೆನುತೆಸಂಬುಗೆಯಿತ್ತುಬಸವನಂತಿಳಿಪಿಬಳಿಕ॥
ನಾನಾಗಣಂಗಳೊಡನೈತಂದುಭಕ್ತಿಸಂ। ಧಾನದಿಂದಲ್ಲಮಪ್ರಭುವೊ
ಲವಿನಿಂದೊಲಿಸಿ। ಸಾನುರಾಗದೊಳೆಬಸವನಮಹಾಮಂದಿರಕೆಕರೆ
ತಂದುರುತ್ಸವದೊಳು॥೫೩॥ ಇಂತುಕರತಂದಮಳಪೀಠದೊಳಗಿ
ರಿಸಿಸುಮ। ನಂತರದೊಳರ್ಘ್ಯಪಾದ್ಯಾದಿಸತ್ಕ್ರಿಯೆಗಳಿಂ। ಸಂತೋ
ಷದಿಂದಲರ್ಚಿಸಿಬಳಿಕಬಸವನತಿಭಕ್ತಿಯಿಂನುತಿಸುತಿರಲು॥ ಮುಂ
ತಿರ್ಪಸಕಲಗಣಕುಲಮನೀಕ್ಷಿಸಿಮನದ। ಚಿಂತೆಯಂಬಿಡಿಸಿಶಿವತ
ತ್ತ್ವಾನುಭಾವಸುಖ। ಸಂತೋಷಸಾಗರದೊಳೋಲಾಡಿಸಿದನಖಿಳ
ಭಕ್ತರಂಪ್ರಭುರಾಯನು॥೫೪॥ ಇದುಸಕಲವೀರಮಾಹೇಶ್ವರರಸದ್ವಿ
ಮಲ। ಹೃದಯಾಬ್ಜಮಿತ್ರನುರುಷಟ್ಸ್ಥಲಬ್ರಹ್ಮವೆಂ। ಬುದಧಿವರ್ಧ
ನಸೋಮನೆನಿಪಗುರುಸಿದ್ಧವೀರೇಶ್ವರನಕರಜಾತನು॥ ಸದಮಲ
ಜ್ಞಾನಿಸಕಲಾಗಮಪುರಾಣಕೋ। ವಿದನಾವಿರೂಪಾಕ್ಷಪಂಡಿತಾರಾ
ಧ್ಯನತಿ। ಮುದವಿಪೇಳ್ದೀಚೆನ್ನಬಸವಪೌರಾಣಸತ್ಕಥೆಯೊಳೊಂದ
ನೆಯಕಾಂಡಂ॥೫೫॥ ಇಂತೆಸವಚೆನ್ನಬಸವೇಶನಪುರಾಣಮಂ। ಸಂ
ತಸದಿಜಗದವರೋದಿದರ್ಗರ್ಥಮಂ। ಗ್ಯಂತಮಂಬಿಡದೆಪೇಳ್ದರ್ಗೆ
ಪರಿಸಿದವರ್ಗೆಭಕ್ತಿಯಿಂಕೇಳ್ದವರ್ಗೆ॥ ಸಂತತಂಸಕಲಸುಖಮಂಸ
ಕಲಭೋಗಮನ। ನಂತಸೌಭಾಗ್ಯಮಂಕೊಟ್ಟುರಕ್ಷಿಸುವನಾ। ಕಂ
ತುಹರನಪರಾವತಾರನೆನಿಸುವಚೆನ್ನಬಸವೇಶನಕ್ಕರಿಂದಂ॥೫೬॥

ಅಂತು ಸಂಧಿ೧೧ಕ್ಕೆ ಪದ೪೯೦ಕ್ಕೆ ಮಂಗಳಂ



ಒಂದನೆಯಕಾಂಡ ಸಂಪೂರ್ಣವಾಯಿತು

ಮಂಗಳಮಸ್ತು.



ಶ್ರೀರಸ್ತು.

# ಚೆನ್ನಬಸವಪುರಾಣವು.

## ಎರಡನೆಯಕಾಂಡ—೧ನೇಸಂಧಿ

**ಸೂಚನೆ॥** ಸಿದ್ಧರಾಮೇಶಂಗೆಚನ್ನಬಸವಂಶೈವ। ಸಿದ್ಧಾಂತ ಸೃಷ್ಟಿಯಂಪೇಳ್ದಬಳಿಕಾಸುಪ್ರ। ಸಿದ್ಧಶಿವನೇಕಪಾದದೆನಿಂ ದುನಟಿಸಿದುರುಲೀಲೆಯಂಪೇಳ್ದನೊಲಿದು॥

ಪದ॥ ಪಾಕಶಾಸನವಿಶ್ವಲೋಕೇಶವರಮುಖರ। ವ್ಯಾಕಸಪ್ರತತಿಮುಕುಟಾಕಲಿತರತ್ನಪ್ರ। ಭಾಕೀರ್ಣಪಾದಮುಹಿಮಾಕರಶಿರೋಧೃತನಿಶಾಕರವರಶ್ರೀಕರ। ಸೂಕರಾಸುರನಯುನಭೀಕರಕೃಪಾಸುರ। ತ್ವಾಕರದಧನಂಜಯುದಿವಾಕರೇಂದ್ವಕ್ಷಿತ್ರ। ಯಾಕರುಣಿಂಜನಾನೀಕಮಂಸಲೆಸಕಲಲೋಕಮಂಶಿವಪೊರೆವುದು ॥೧॥ ನಸುನಗುತಲಲ್ಲಮಂಬಸವನೊಡನೀಚನ್ನ। ಬಸವಂಣನಾಲಯಕೆಪೋಪೆವೇಳೆಂದುಗಣ। ವಿಸರಮಂಕೂಡಿಕೊಂಡೈತಂದುತನ್ನಸಾಮಂದಿರದಚತ್ವಿಕೆಯನು॥ ಒಸೆದುನಿಟ್ಟಸುತಿರಪ್ಪಕ್ಷಣಂಕಗೌರಂ। ಜಸುತಿರ್ಪವರಸಭಾಮಂಟಪದೊಳೆಂದುಸಂ। ತಸದಿನಲ್ಲರ್ಪಹಿತಕುಳ್ಗುರ್ಪಪಭುಚನ್ನಬಸವನೊಡನಿಂತೆಂದನು ॥ ಇಂತಿದೇನೈನಮ್ಮನಲ್ಲರಂಕರೆಗುತಂ। ದಂತಃಪುರಕೊಯ್ದಿಲ್ಲಿನೋಕುಳ್ಳಿರಿಸಿ। ದಂತಸ್ತನೇನೆನಲ್ಕೆಸುನಗುತಚನ್ನಬಸವಂಣನಾಗ್ರಹವಿನೋಡನೆ॥ ಅಂತರಹಿತಂಜಗತ್ಪಾವನನೆಯುಲ್ಲಿಂದ। ಮುಂತೆಷಟ್ಸ್ಥಲಮಾರ್ಗಮಂತಿಳಿಪಿದಲ್ಲದಗ್ರ। ಹಾಂತರಕೊಗ್ಗೀರ್ವರಂಬಿಡಲೆಂದುಚನ್ನಬಸವೇಶಮುಗುಳ್ನಂತೆಂದನು ॥೨॥ ಅಂಗದೊಳ್ನೋಡೆಲೇಸಿದ್ಧರಾಮಂನಿಷ್ಟ। ಲಿಂಗನೇಮುನ್ನಿಲ್ಲವಿಂತಪ್ಪುದಂಮಹಾ। ಲಿಂಗಾಂಗಿಗಳೊಳ್ಪೇಗಲೆಂದುದಗುಕಾರಣದೊಳಲ್ಲಿನೋಕುಳ್ತೆವೆನಲು ॥ ಹಿಂಗನಾನುಡಿಗೇಳ್ದುಸಿದ್ಧರಾಮಂಪ್ರಾಣ। ಲಿಂಗಿಯಾಂಚನ್ನಬಸವಂಣಕೇಳೆನಗಿಷ್ಟ। ಲಿಂಗಮಂನೇಕೆನಲ್ಕೆಸುನಗುತಲಾಚನ್ನಬಸವಂಣನಿಂತೆಂದನು॥೩॥ ಎಂತಾಪುದೈನಿನಗೆಪರಣಲಿಂಗಮುಸದ। ಭ್ರಾಂತಿಯುಲ್ಲನೆತಪುತ್ರಯನಿದಿನಬಳಿಕಲ್ಲಿ। ಸಂತತಂತ್ರಿವಿಧಲಿಂಗಪಘಲಸಬೇಕಿಷ್ಟಲಿಂಗನೇನಿನಗಿಲ್ಲದೆ॥ ಮುಂತೆರಡುಲಿಂಗಂಗಳೆಳೆವಟ್ಟಭೇದಮಂ। ನಿಂತಿಳಿಯಪೇಳೆನಲುಸಿದ್ಧರಾಮೇಶ್ವರಂ। **ಸಂತಸದೊಳಾಚನ್ನಬಸವದಂಡಾಧೀಶನೊಡನಾಗಳಿಂತೆಂದನು॥೪॥ ಅಂಗಮೂರುಳ್ಳವರಿಗಾಗಬೇಕಾಮೂ**

ರು । ಲಿಂಗಂಗಳೆನಗೆಲ್ಲರಂದದಿಂ ಬೇರೆಮೂರು । ರಂಗಂಗಳಿಲ್ಲೆನ್ನ ಕಾಯವೇ ಪೀಠವಿಾ ಪ್ರಾಣವೇ ಲಿಂಗವೆನಲು ॥ ಹಿಂಗದಾನುಡಿಗೇಳ್ದು ಚನ್ನಬಸವಂ ತುಷ್ಟ । ಲಿಂಗವಿಲ್ಲದ ಬಳಿಕ ಶಾಕ್ತನೇ ಭವಿ ಶೈವ । ನಂಗೆವಲ್ಲದೆ ವೀರಶೈವನಲ್ಲೆನೆ ಸಿದ್ಧರಾಮೇಶನಿಂತೆಂದನು ॥೬॥ ಶೈವವೇ ಸಕಲಶೈವಕ್ಕಾದಿಯಾಮುದಾ । ಶೈವದಿಂದಾದುದೀ ವೀರಶೈವಂ ಮುಖ್ಯಶೈವಂಗಳೆಂದೆನಲ್ಕೇಳ್ದು ನಸುನಗುತಲಾ ಚನ್ನಬಸವಂಣನಂದು॥ ಶೈವದಾದಿಯ ಸೃಷ್ಟಿ ಬೇರೆ ಕೇಳಾ ವೀರ । ಶೈವವೇ ಬೇರೆನಲ್ಸಿದ್ಧರಾಮಯ್ಯನಾ । ಶೈವದಾದಿಯನೆನಗೆ ವಿಸ್ತರಿಸಿ ಪೇಳೆನಲು ಚನ್ನಬಸವಂ ಪೇಳ್ದನು ॥೭॥ ಆದಡಿನ್ನಾಲಿಸೈ ಸಿದ್ಧರಾಮೇಶನೀ । ನಾದಿಶೈವದ ಸೃಷ್ಟಿಮಾರ್ಗಮಂ ಪೇಳ್ವೆನೆಂ, ಭೇದಿಸಲ್ಕತ್ಯತಿಷ್ಠದ್ದಶಾಂಗುಲನೆನಿಪ ಪರಶಿವಂ ಗೋಪ್ಯದಿಂದಂ ॥ ವೇದವೇದಾಂತ ಸಿದ್ಧಾಂತಶಾಸ್ತ್ರಂಗಳೆಸು । ನಾದಬಿಂದುಗಳಾದಿಗತಿದೂರನೆನಿಸುತಲ। ನಾದಿಕಾಲದ ಸರ್ವಶೂನ್ಯನಾಗಿರುತಿರ್ದನೇನೆಂದು ಬಂಣಿಸುವೆನು ॥೮॥ ಪರವೆಂದು ಪರಕೆ ಪರವೆಂದು ಪರತತ್ವವೆಂ । ದುರುತರ ಪರಂಜ್ಯೋತಿಯೆಂದು ಪರಸುಖವೆಂದು । ಪರಮಕಾರಣವೆಂದು ಪರಮೇಶನೆಂದು ಪರತರಪರಬ್ರಹ್ಮವೆಂದು ॥ ನಿರವಯವನೆಂದು ನಿತ್ಯನದೆಂದು ನಿಶ್ಶೂನ್ಯ। ನಿರುಪಮ ನಿರಾಕಾರನೆನಿಪನಾಮಂಗಳಿಂ । ಪರಶಿವಂ ತನ್ನ ನಿಜಸುಖಾಸಮಾಧಿಯೊಳಿರ್ದುತಿರ್ದು ಬಳಿಕಾಕ್ಷಣದೊಳು ॥೯॥ ಪರಶಿವಂ ಚಿತ್ತದಿಪವೃತ್ತಿಯಂ ನೆನೆಯಲಂ, ದುರುತರದ ಚಿತ್ತ ಚಿಚ್ಛಕ್ತಿಯಾಯ್ತದರಿಂದ । ಪರಮಪಾಲಿಂಗವಾಯ್ತದರಿಂ ಪರಾಶಕ್ತಿಯಾದುದವರೀರ್ವರಿಂದಂ। ಉರುಸದಾಶಿವನಾದನಾ ಸದಾಶಿವನಿಗಂ। ದಿರದಾದಿಶಕ್ತಿಯಾದಳು ಬಳಿಕ್ಕವರೊಳೀಶ್ವರನಾದನಾತಗಿಚ್ಛಾಶಕ್ತಿಯಾದಳವರೀರ್ವರಿಂದೇನೆಂಬೆನು ॥೧೦॥ ಪರಮಹೇಶ್ವರನಾದನಾತಂಗೆ ರಂಜಿಸುವ। ಪರಮಶುಜ್ಞಾನವೆನಿಸುವ ಶಕ್ತಿಯಾದಳಂ। ಬಿರದಾಮಹೇಶರಿಂದಧಿಕತರ ಸೃಷ್ಟಿಯಾಯ್ತೆಂದಾಗ ತಿಳಿಯ ಪೇಳೆ ॥ ವಿರಚಿಸೆಲೆ ಚನ್ನಬಸವೇಶ ಮುಂದಪ್ಪಘನ । ತರದಖಿಳಸೃಷ್ಟಿಯಂ ನೀನೆಂದು ಕೇಳಲತಿ । ಕರುಣದಿಂ ಸಿದ್ಧರಾಮೇಶನೊಡನಾ ಚನ್ನಬಸವಣ್ಣನಿಂತೆಂದನು ॥೧೧॥ ಲೀಲೆಯಿಂದಾ ಮಹೇಶಂ ವಿರಾಡ್ರೂಪವಂ । ತಾಳಲಾತನ ಪಾದ ಗುಲ್ಫ ಜಂಘಾ ಜಾನು। ಮಾಲಕ್ಷಿತವೆನಿಸಿ ಪೂರು ಕಟಮಧ್ಯ ನಿಚಯಗಿಂ ಪಾತಾಳಮುಖ್ಯವಾದ ॥ ಸಾಲೆನಿಪಧೋಭುವನಸಪ್ತಮುಂ ಘನತರವಿ । ಶಾಲದಿಂದುದಯಿಸಿದವೆಲೆ ಸಿದರಾಮನೀಂ । ಕೇಳಿನ್ನು ಪರಿಲೋಕದು

ದ್ಭವಂಗಳೆನೆಂದು ಚೆನ್ನಬಸವಂ ಪೇಳ್ದನು ॥೧೨॥ ಪರಿಕಿಸಲ್ಭೂರ್ಭುವಃ
ಸ್ವರ್ಮಹಾಲೋಕಾದ್ಯ। ಪರಿಲೋಕತತಿ ನಾಭಿಯುದರಂ ಭುಜಂ ಹೃ
ದಯ। ಮುರುಕಂಧರಂ ಮುಖಂ ಶಿರವೆಂಬ ತಾಣದೊಳು ಸಂಭವಿಸಿದ
ವು ಭರದೊಳು॥ ಶರಧಿಯೇಳುಂ ನಿಜಶರೀರಕಾಂತಿಯೊಳಾದ। ವಿರಪೆ
ದಶದಿಕ್ಕುಗಳ್ಕರ್ಣಂಗಳೊಳ್ಸಕಲ। ಗಿರಿಸಮೂಹಂ ಪೆರಡುಮುಡುಗ
ಳೊಳ್ಜನಿಸಿದವು ಪೇಳಲೇನಚ್ಚರಿಯನು ॥೧೩॥ ಪೊಳೆವಾಸ್ಯದೊಳು
ರುದ್ರನೆಡದಭುಜದೊಳು ವಿಷ್ಣು। ಬಲತೊಡೆಯೊಳು ಬೊಮ್ಮನಂಘ್ರಿ
ಯೊಳ್ದೇವೇಂದ್ರ। ನೊಲವಿನಿಂ ಮಾನಸದೊಳಿಂದು ರವಿ ನಯನದೊ
ಳ್ಜನಿಸಿದರು ಲೀಲೆಯಿಂದಂ॥ ತಿಳಿಯಲಾದ್ವಾದಶಾದಿತ್ಯರ್ನಖಂಗಳೊ
ಳಿಳೆಮೂಲದೊಳು ಸಪ್ತಋಷಿಗಳುರದೊಳ್ಭಗಣ। ಕುಲಮುಸವ
ಪಣೆಯೊಳೊಪ್ಪುವ ಮಹಾರುದ್ರರುದ್ಭವಿಸಿದರ್ಸಂತಸದೊಳು ॥೧೪॥
ವರನವಬ್ರಹ್ಮರಂಗುಳಿಯೊಳ್ಚತುರ್ದಶೇಂ। ದ್ರರುಮುಭಯಪಾರ್ಶ್ವ
ದೊಳ್ಬಹುವಿಧದಶಕ್ತಿಗ। ಳ್ಬೆರಳಸಂಧಿಗಳೊಳ್ಚತುರ್ದಶಮನುಗ
ಳಾತನಂಗೈಯೊಳುದಯಿಸಿದರು ॥ ಪರಮವೇದಾಗಮಪುರಾಣೋ
ಪನಿಷದತುಳ । ತರಶಾಸ್ತ್ರಸಂಕುಲಂ ವಾಣಿಯೊಳ್ಸಕಲನದಿ । ತ
ರುಣಿಯುತ್ತಿಳಿಯಲಾನಂದಾಶ್ರುವಾರಿಯಿಂ ಜನಿಸಿದರ್ಸಂಭ್ರಮದೊ
ಳು ॥೧೫॥ ಗರುಡಗಂಧರ್ವಕಿನ್ನರಸಿದ್ಧಸಾಧ್ಯಕಿಂ । ಪುರುಷ
ಸುರರೆಂಬತೆತ್ತೀಸಕೋಟಿಗಳೆಸವ । ಶಿರದೊಳುದ್ಭವಿಸಿದಮಾರ್ಣ
ದರುವತ್ತಾರುಕೋಟಿರಕ್ಷಸವೀರರು ॥ ತರತರದರೋಮಕೂಪಂ
ಗಳೊಳಗುದಯಿಸಿದ । ರುರುನಾಗಮುಖ್ಯಾನಾನಾಜನ ಮದಾಮ
ಹೇ। ಶ್ವರಾವಯವಂಗಳೊಳ್ಸಂಜನಿಸಿದುದು ಸಿದ್ಧರಾಮನೀಕೇಳೆಂ
ದನು ॥೧೬॥ ಮಿಗೆನವಗ್ರಹಮಷ್ಟದಿಕ್ಪಾಲಕತ್ತಿಳಿಯು। ಮೊಗುಮಿ
ಗೆಯೊಳಷ್ಟವಸುಗಳ್ಕಪೋಲಂಗಳೊ। ಳ್ಮೃಗಪಕ್ಷಿಜಲಚರಾದಿಗಳೆಪಾ
ದಾಂಗುಲಿಯೊಳುದ್ಭವಿಸಿದವು ಮುದದೊಳು॥ ನಗಲತಾಗುಲ್ಮತೃಣ
ಕಾಷ್ಠಂಗಳಾತನಂ। ಘ್ರಿಗಳ ಬೆರಳಡಿಯೊಳಾದವು ಸಕಲಪಶುನಿಕರ।
ವೊಗದುದಾತನಕಕ್ಷಯುಗ್ಮದೊಳ್ಪೇಳಲೇನಾತನ ಮಹಾಲೀಲೆ
ಯಂ॥೧೭॥ ರಾಮ ಕೇಳಾ ಮಹೇಶ್ವರನ ಸರ್ವಾಂಗದೊಳೆ। ಈ ಮಹಾಸ
ಚರಾಚರಂಗಳುದ್ಭವಿಸಿಯು। ದಟ್ಟಮುಲೋಕದಸೃಷ್ಟಿ ತನ್ನದೆಸೆಯಿಂ
ದಾದಬಳಿಕಲಾಕಲ್ಪಾಂತಕೆ॥ ಆ ಮಹೇಶ್ವರನತುಳಲೀಲೆಯಿಂದಖಿ
ಳನಿ। ಸ್ಸೀಮಗಣಸಂಕುಲದ ಮಧ್ಯದೊಳ್ಪುಟುತರನಿ। ಕಾಮಲೋ
ಕಪ್ರಳಯತಾಂಡವಾಡಂಬರಮನನುಕರಿಸಿದಂ ಮುದದೊಳು ॥೧೮॥

ಪೇಳಲೇನೆಲೆರಾಮ ಪೊಸತೆಂಮಹೇಶ್ವರನ| ಲೀಲಾವಿನೋದವಿಂ ತನ್ನಿಂದಜನಿಸಿದವಿ|ಶಾಲಸೃಷ್ಟಿಗಳೆಸವಪಾದಚಾರಗಳವಿನ್ಯಾಸದಿಂ ನಿಮಿಷದೊಳಗೆ| ಧೂಳಿಪಟವಾದವಾಹರಿವಿರಿಂಚ್ಯಾದಿಜನ | ಮಾಲೋಕವಾಶರಧಿಯಾದ್ವೀಪವಾಗಿರಿಗ | ಳೋಲೈಸಿದವುನಿರಾಕಾರಮಂಶಿವನತಾಂಡವಮನದನೇನೆಂಬೆನು ||೧೯|| ಸಾಗರದಮಸಕದಿಂದುದಯಿಸಿದಬೊಬ್ಬುಳಿಗ ಳಾಗಳೇಘನತರಂಗದಹೊಯ್ಲಿಗಾಗಡ ತೆ| ವಾಗುವಂತಾಮಹೇಶ್ವರನತ್ರಿರೂಪಿನೊಳುರುಬಿದುದ್ಭೂತನಾಯುವಿಂದಂ || ಸಾಗಿಯಾಚರಾಚರಜರವೀಶಸಂಗದೊ| ಳೊವೇಗಿಕೂಡಿದುದೇಕಪಾದದಿಂದಂದುಸೊಗ | ಸಾಗಿಲೋಕಪ್ರಳಯತಾಂಡವಾಡಂಬರವನಳಿಯಿಂನಟಿಯಿಸಿದನು||೨೦|| ಇಂತುಸಚರಾಚರಂಗಳು ವಿಲಯಮಾಪಸವು| ನಂತರದೊಳೆಸವಾಸ್ಕಶಾನರುದ್ರತ್ವಮುಂ| ತಾಂ ತಳೆದು ತನ್ನಹೇಶಂಮುದದೊಳೇಕಪಾದಾಸ್ಯಯದಲೀಲೆಯಿಂದಂ|| ಸಂತೋಷದಿಂಮೆರದನೆನೆಸಿಗ್ಧರಾಮನ| ಸ್ವಂತಪದುಷಟಕೇಳ್ವ ಚನ್ನಬಸವೇಶನೀಂ | ಮುಂತ್ರೀಜಗತ್ಸೃಷ್ಟಿಯಂತಾದುದುಸುರೆನಲ್ಪೇಳ್ಗಂಸವಿಸ್ತರದೊಳು||೨೧|| ಇಂತಸವಚನ್ನಬಸವೇಶನಪುರಾಣವಂ| ಸಂತಸದಿಬರದವರ್ಗೋದಿದರ್ಗರ್ಥವಾ| ದ್ಯಂತವಂಬಿಡದೆಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂಕೇಳ್ದವರ್ಗೆ|ಸಂತತಂಸಕಲಸುಖಮಂ ಸಕಲಭೋಗಮುನ| ನಂತಸೌಭಾಗ್ಯವಂಕೊಟ್ಟುರಕ್ಷಿಸುವನಾ| ಕಂತುಹರನಪರಾವತಾರನೆನಿಸುವಚನ್ನಬಸವೇಶನಳ್ಕರಿಂದಂ ||೨೨||

ಎರಡನೆಯಕಾಂಡದಲ್ಲಿ ೧ನೇ ಸಂಧಿ ಮುಗಿಯಿತು.

## ೨ನೇಸಂಧಿ.

ಸೂಚನೆ|| ಮರಳಿಮಾಹೇಶ್ವರಂತನ್ನಹಾಸೃಷ್ಟಿಯಂ | ವಿರಚಿಸಿಯುಮಾಮಹೇಶ್ವರಲೀಲೆಯಿಂವೃಷಭ | ವರವಾಹನದ ಲೀಲೆಯಿಂಮೆರದಕಥನಮಂಚನ್ನಬಸವಂಪೇಳ್ದನು||

ಪದ|| ಚಂದ್ರಾರ್ಧಚೂಡವೃಷಭೇಂದ್ರವಾಹನದಾನ| ವೇಂದ್ರಮದಕುಂಜರಮೃಗೇಂದ್ರಸನ್ನುತಸುಗುಣ| ಸಾಂದ್ರಕಮಲಾಸನೋಪೇಂದ್ರನಮಿತಪದಾಬ್ಜಚಂದ್ರಕಾಂತೋಪಮಾಂಗ|ಇಂದ್ರಾಭಿನುತವರಫಣೀಂದ್ರಭೂಷಣಹಿಮಗಿ| ರೀಂದ್ರವರತನುಜಾಸ್ಯಚಂದ್ರಸುಚಕೋರಪಮ| ಧೇಂದ್ರಪರಿವಾರಪಂಪಾವಿರೂಪಾಕ್ಷನತಬ್ಬೃಂದವಂಪಾಲಿಸೂಲ್ಗೆ||೧|| ಆಮಹೇಶ್ವರಸಾಕ್ಷಿಯಿಂಪ್ರಕೃತಿವಿಕರಿಸಿ| ತಾಮಹಾಪ್ರಕೃತಿಯಿಂದಂಮಹತ್ತುದಿಸಿತಂ| ದಾಮಹತ್ತಿನೊಳಹಂಕಾರಮುದ್ಭ

ವಿಸಿದುದು ಮೂಱಹಂಕಾರದಿಂದಂ॥ ತಾಮಸಂ ಸಾತ್ವಿಕಂ ತೈಜಸಂಗ
ಳ್ಕೆಳಿಕ್ಕಾತ್ತು ಮಹಾವೈಕಾರಿಕಂಗೂಡಿ ಜನಿಸಿದವು। ರಾಮಕೇಳೀಗುಣಂ
ಗಳಿಗೊಡೆಯರಾಗಿಪ್ಪ ದೇವತೆಗಳಂ ಪೇಳ್ವೆನು॥೧॥ ಪರಮಹೇಶ್ವರನ
ಪಣೆಯಿಂದೆ ತಾಮಸವನನು। ಕರಿಸಿ ಸಂಜನಿಸಿದಂ ರುದ್ರನಾ ಶಿವನಘ
ನ। ತರನಾಮಭುಜದಿಂದೆ ಸಾತ್ವೀಕಗುಣವನನು ಕರಿಸಿದಂ ವಿಷ್ಣು ಬ
ಳಿಕ॥ ಇರದಾ ಶಿವನ ಬಲದ ಭುಜದೆ ತೈಜಸವನನು। ಕರಿಸಿ ಜನಿಸಿದ
ನಜಂ ವೈಕಾರಿಕೆಯೊಳಿನ್ನು। ಪರಮ ಶಬ್ದಸ್ಪರ್ಶರೂಪರಸಗಂಧಂಗ
ಳಾದವವರಿಂದೆ ಬಳಿಕ ॥೨॥ ಪ್ರೀತಿಯಿಂ ಗಗನಾನಿಲಾಗ್ನಿ ಜಲಭೂ ಪಂ
ಚ ಭೂತಮುದಿಸಿದವು ಪರಶಿವನಾಜ್ಞೆಯಿಂ ಬಿರದೆ। ವಾತಮುರೆ ಪಱ
ಟಿಸಲ್ತ್ರರಪಾದುದಾಗಸಂ ತದ್ವಾತಸಂಗದಿಂದಂ ॥ ವಾತಸಖನುದಕ
ಮಂ ಕೂಡಲ್ಕೆ ಕುದಿಕುಬಿಗು। ಭೂತಳದೆ ಕೂಟದೆ ಹಿರಣ್ಮಯದತೇಜ
ಬಿಂ। ದಾತಪ್ತ ಭೂಜಲದ ಬೊಬ್ಬುಳಿವೊಳೊಂದಂಡಮಾದುದದನೇ
ವೇಳ್ವೆನು ॥೪॥ ಪರಿಕಿಸೆ ತದಂಡವೈವತ್ತುಕೋಟಿಯಸುವಿ। ಸ್ತರ
ವದುವೆ ಮೂಱಂಡದೀರ್ಘದುಮಡಿ ಜಲಂ। ಪರಿವೇಷ್ಟಿಸಿಹುದು ಜಲದೀ
ರ್ಘದುಮಡಿಯಗ್ನಿ ಬಳಸಿಹುದು ನಿಬಿಡವಾಗಿ॥ ಮರುತಸಖನೀರ್ಘ
ದುಮಡಿ ವಾಯುವವಗಾಹಿ। ಸಿರಲುಗಂ ಮರುತನೀರ್ಘದುಮಡಿಯಾಗ
ಸಂ। ಹರಹಿನೊಳು ಸುತ್ತಿರಲ್ಕಾಗಸಮನೊಡನಹಂಕಾರಮದು ಬಳೆ
ಸಿಪ್ಪುದು॥೫॥ ಮತ್ತಹಂಕಾರಮಂ ಬಳೆಸಿಕೊಂಡಿಪ್ಪುದು ಮ। ಹತ್ತಾ
ಮಹತ್ತನವ್ಯಕ್ತ ಪ್ರವೇಷ್ಟಿಸಿ। ರ್ದತು ಸಪ್ತಾವರಣಮಿಂತು ಹರನಾಜ್ಞೆ
ಯಿಂ ಮಧ್ಯದಂಡಮನೆಸ್ಪೊಕ್ಕ॥ ಬತ್ತಿ ಕಮಲಜನೊಡೆಯ ಬ್ರಹ್ಮಾಂ
ಡಮೆಂಬುದಾ। ಯಿತ್ತು ಪೆಸರದಕಾ ಮಹೇಶ್ವರಂ ಮಿಗೆಯೋಚಿ। ಸು
ತಿರ್ದನೆನ್ನ ಪಣೆಯಿಂದಾದ ರುದ್ರನೇ ತನ್ನ ಸ್ವರೂಪವೆಂದು॥೬॥ ಸೃ
ಷ್ಟಿಸ್ಥಿತಿಪ್ರಳಯಮಂ ಮಾಳ್ಪ ಸಾಮರ್ಥ್ಯ। ಮಷ್ಟಮುಂಟೀತಂಗೆನು
ತ್ತಾ ಮಹೇಶ್ವರಂ। ಹೃಷ್ಟಮಾನಸನಾಗಿ ಹರಿಯಜರೊಳೀತನೇ ನಿ
ಮಗೊಡೆಯನೆಂದು ಪೇಳಿ॥ ನಷ್ಟವಿಲ್ಲದ ಪಟ್ಟಮಂ ಕಟ್ಟಿ ರುದ್ರಗಂ। ದಿಷ್ಟವೆ
ನಿಸುವ ಕ್ರಿಯಾಶಕ್ತಿಯಾಗಲ್ಕೂಡಿ। ದೃಷ್ಟದಿಂ ಪರಶಿವಸದಾಶಿವಾದಿಗ
ಳನಾಮಂಗಳಂ ತಾಂ ತಳೆದನು॥೭॥ ಪರಶಿವಂ ಶಿವನೆನಿಪ್ಪರಡು ನಿಷ್ಕ
ಲ ತತ್ವಮುರು ಸದಾಶಿವನೀಶ್ವರಂ ಸಕಲನಿಷ್ಕಲಂ। ಪರಮಹೇಶ್ವ
ರನಾದಿರುದ್ರರೆಂದೆನಿಪರೇ ಕೇವಲಂ ಸಕಲತತ್ವಂ ॥ ಪರಿಕಿಸೆ ಸದಾಶಿ
ವಂ ಪಂಚಸಾದಾಖ್ಯಮುಂ। ಧರಿಸಲೀಶ್ವರನುಂಗಲಷ್ಟತನುವಂ ತಾಳ್ದ
ನಿರದಾ ಮಹೇಶ್ವರಂ ಪಂಚವಿಂಶತಿ ಲೀಲೆಗಳನಾಂತನೇನೆಂಬೆನು॥೮॥

ಆಮಹಾರುದ್ರಂ ಕೃಪೆಯಾ ಶಕ್ತಿಯೊಳ್ ಕೂಡಿ। ಪ್ರೇಮದಿಂ ವರಮಹೇ
ಶ್ವರನಾಮದಿಂದೊಲ್ದು । ಸೋಮಾದಿ ಪಂಚವಿಂಶತಿ ಲೀಲೆಯಂ ತಳೆದ
ನೆನೆಸಿದ್ದ ರಾಮಸಂದು ॥ ಈ ಮಹಾ ಲೀಲೆಗಳನೆನಗೆ ವಿಸ್ತರಿಸೆನಲು।
ರಾಮಕೇಳ್ ರುದ್ರನಜನನೊಲವಿಂ ಕರೆದು। ನೀ ಮಾಡು ಸೃಷ್ಟಿಯನೆ
ನಲ್ಕಾಗದಬುಜಜಂ ತಪಿಸಿದಂ ಶಿವನ ಕುರಿತು ॥೯॥ ದೇವನೀತನ ಸತಪ
ಕೆ ಮೆಚ್ಚಿ ಬೇಡೆನೆ ಸುರಾ। ಜೀವಪೀತ ಸೃಷ್ಟಿಯಾಗದೆನ್ನಿಂ ಸುತರ। ನೀ
ವುದೆನೆ ಸನಕ ಸನಂದನ ಸನತ್ಸುಜಾತ ಸುಜಾತನುಮೊಪ್ಪುವ॥ ಕೋ
ವಿದ ಸನತ್ಕುಮಾರಾದಿ ಮಾನಸ ಸುತರ। ನಾವಿಭು ಪೆತ್ತನೊಲಿದು ಕೊ
ಟ್ಟು ನಿರವಯನಾಗ। ಲಾ ವೇಳೆಯೊಳ್ ಮಕ್ಕಳಂ ಕರೆದು ಕಮಲಜಂ ಸೃ
ಷ್ಟಿಯಂ ಮಾಡೆಂದನು॥೧೦॥ ಒಲ್ಲೆವಾಂ ಸೃಷ್ಟಿಯಂ ಮಾಡಲ್ಕೆ ಬುದ್ಧಿಯಂ।
ಬಲ್ಲೆವೆಸಗನವರದಿನ್ನಿನಗೆ ಸುತರಾಗಿ। ಯುಲ್ಲಾರಹಸ್ಯಮಂ ನಿನ್ನಿಂದ
ಲೇ ತಿಳಿದು ಸಂಸಾರ ಬಂಧದೊಳಗೆ॥ ಖುಲ್ಲರಾಗಪೆವೆಂತೆನುತ್ತಂ ತಪೋ
ವನಕೆ। ಮೆಲ್ಲನಡಿಯಿಟ್ಟರಿವರಿತ್ತಲೀ ಕಮಲಜಂ। ನಿಲ್ಲದೆ ತಪಸ್ಸಿನಿಂದಿ
ವ್ಯಾಸಾಸಿವರ್ಗರುಷಕಭವನಂ ಮೆಚ್ಚಿಸಿದನು ॥೧೧॥ ಪರಶಿವಂ ಪ್ರತ್ಯಕ್ಷ
ಮಾಗಿ ವರವೇನೆನೆ। ಸರಸಿಜಭವಂ ಕಾಣುತೆಲೆ ದೇವ ನೀವಿತ್ತ। ವರ
ಮಾನಸಾತ್ಮಜರ್ತಪಕ್ಕೈದಿದರು ಸೃಷ್ಟಿಯಾಗದೆನ್ನಿಂದಲೆನಲು॥ ಕರು
ಣದಿಂದೀಶನಜನೊಡನೆಂದನಿನ್ನೀಶ। ರೀರದಿಂ ಮಕ್ಕಳಂ ಪಡೆದು ಸೃ
ಜಯಿಸುವುದೆಂ। ದೊರೆದು ನಿರವಯನಾಗಲಜನಳ್ತಿಯಿಂದೆ ಮಕ್ಕಳ
ಪಡೆಯಲನುವಾದನು ॥೧೨॥ ಮನದೊಳು ಮರೀಚಿನಯನದೊಳ
ತ್ರಿಯಾಸ್ಯದೋ। ಳ್ಜನನು ತಾಂ ಗೀರಸಪುಲಸ್ತ್ಯನಾ ಕಿವಿಯೊಳಾ। ತ
ನನಾಭಿಯಿಂ ಪುಲಹನುರುಹಸ್ತದಿಂದೆ ಕ್ರತು ಚರ್ಮದಿಂ ಭೃಗು ಪರಣದಿಂ
ದ॥ ಅನಘನೆನಿಸುವ ವಸಿಷ್ಠಂ ದಕ್ಷನುಂ ಗುಟದೆ। ಜನಿಸಿದರ್ಪೇಳಿದೀ
ರೊಂಬತ್ತುಮುಂದಿಮು। ತ್ರಿನತುಸಾಲದೆ ತನುಜರಂ ಪಡೆಯಲುದ್ಯೋ
ಗಿಸಿದನಜಂ ತಕ್ಷಣದೊಳು॥೧೩॥ ತೊಡೆಯಿಂದ ನಾರದಂ ಧರ್ಮನಾ
ವಿಧಿಯ ಬಲ। ಗಡೆಯ ಮೊಲೆಯಿಂದನೆಳಲಿಂದ ಕರ್ದಮನಾತನೊಡ
ಲಿಂದಿ ಮಾರಾತ್ರಿಗಳ್ಮೆರೆಯೆ ಗಾಯತ್ರಿ ಮುಂತಾದ ಛಂದಂಗಳು॥ ನುಡಿ
ಯುಲಗಣಿತಮಾದ ವೇದಶಾಸ್ತ್ರಂ ಜನಿಸೆ। ಪಡೆದ ಮಕ್ಕಳನಜಂ ಕರೆದು
ಸೃಷ್ಟಿಯನಿನಿಬರೊಡರಿಚಿ ಎನಲ್ಕೆ ಯೋಚಿಸಿಯುವರ್ನಮ್ಮ ಕೈಯಿಂ
ದಾಗದೆಂದರಂದು ॥೧೪॥ ಎನೆ ಕೇಳ್ದು ಕಮಲಜಂ ಚಿಂತಿಸುತ್ತಾ ಕ್ಷಣಂ।
ನೆನೆದು ಹೃದಯದೊಳಾ ಕ್ರಿಯಾಶಕ್ತಿಯಂ ಕೂರ್ತು। ಘನತರ ತಪಸ್ಸಿ
ನಿಂ ಮೆಚ್ಚಿಸಲ್ಕಾ ಕ್ರಿಯಾಶಕ್ತಿ ಪ್ರತ್ಯಕ್ಷಮಾಗಿ॥ ಮನಜಸಂಭವನಿನಗೆವ

ರೆವದೇಂಬೇಡೆನಲು । ಮನದೊಳಗೆಗುಡಿಗಟ್ಟೆ ತತ್ಕ್ರಿಯಾಶಕ್ತಿಯಂ।
ವಿನಯದಿಂಕೊಂಡಾಡಿದಂಸರೋಜಾನನಂಭಯಭರಿತಭಕ್ತಿಯಿಂದಂ॥
ಚಿತ್ತೈಸು ತಾಯೆ ನೀಂ ಪರಶಿವನೊಳೊಂದಿರಲು। ಬಿತ್ತರಿಸಲಘಟಿತಂ
ಸೃಷ್ಟಿ ನೀನೆನಗೆವರ। ವಿತ್ತು ರಕ್ಷಿಪುದೆನ್ನ ಸುತದಕ್ಷನುದರದೊಳು ನೀಂ
ಜನಿಸಿ ಲೀಲೆಯಿಂದಂ ॥ ಮತ್ತಾದಿರುದ್ರಂಗೆವಧುವಾಗಳೆಮ್ಮೊಳಗಿ।
ರುತ್ತಿರ್ಪ ಶಕ್ತಿಗಳ್ಸ್ತ್ರೀಯರಪ್ಪರ್ತಂನಿ। ಮಿತ್ತವಾಕೆಗಳದಸೆಯಿಂದ
ಈಸೃಷ್ಟಿಯಂ ಮಾಡುವೆಂ ತಾನೆಂದನು॥೧೬॥ ಲೇಸಾಗುದೈಬ್ರಂಹದ
ಕ್ಷಂಗೆಬಂದಾಂವಿ। ಲಾಸದಿಂ ಮಗಳಪ್ಪೆ ನೀಂ ನಿನ್ನೊಳೊಂದಿಪರ್। ಭಾ
ಸುರದವರಶಕ್ತಿಯಂ ಬಹಿಷ್ಕರಿಸಲ್ಕೆ ವಾಗ್ದೇವಿಯೆಂದಿನಿಪಳು॥ ಆಸತಿ
ಯೊಳೊಂದಿ ನೀ ನೀ ಜಗತ್ಸೃಷ್ಟಿಯಂಬೇ। ಸರದೆ ಮಾಡೆಂದು ನೇಮವಿ
ತ್ತಂಭೋರುಹಾಸನನನಳ್ಕರಿಂಬೀಳ್ಕೊಟ್ಟು ಶಕ್ತಿಯಂತರ್ಧಾನದಿಂ
ಪೋದಳು॥೧೭॥ ಇಂತೆಂದು ಶಕ್ತಿ ಬಯಲಾಗೆಕಮಲಾಸನಂ। ತಾಂತೆ
ನ್ನ ಭಾರತಿಯೊಳೊಲವಿನಿಂ ಕೂಡಿರುತೆ । ಸಂತಸದೆ ಶತರೂಪೆ ಸ್ವಾ
ಯಂಭುವಂ ಪಡೆದು ದಂಪತಿಗಳಂ ಮಾಡಲು॥ ಅಂತವರ್ಗುತ್ತಾನಪಾ
ದಂ ಪ್ರಿಯವ್ರತಂ । ಪಿಂತೆಯಾಕೂತಿಯುಂ ದೇವಹೂತಿಯುಂ ಮಸವೆ।
ಕಾಂತೆ ಪ್ರಸೂತಿಯೆಂಬೈವರುದಿಸಿದರೊಲ್ದು ಸ್ವಾಯಂಭುವಮನುಗಾ
ಗಳು ॥೧೮॥ ಇವು ತಾಪ್ರಸೂತಿ ದಕ್ಷಂಗೆ ಸತಿಯಾಗಲಂ। ದುರುಕೃಯಾ
ಶಕ್ತಿಯಾಕೆಯಗರ್ಭದೊಳು ಜನಿಸಿ। ಪರಮೇಶ್ವರಂಗೆ ದಾಕ್ಷಾಯಣಿ
ಯನೀಯಬೇಕೆಂದಜಂ ತಪಿಸುತಿರಲು॥ ಪರಶಿವಂ ಪ್ರತ್ಯಕ್ಷವಾಗಿ ವರ
ವೇನೆನಲು। ಕರುಣನಿಧಿ ನೀನೆಂನ ನಂದನನ ನಂದನೆಗೆ। ವರನಾಗಿದಿ
ನದಿನದೊಳೊಡ್ಡೋಲಗಂಗೊಟ್ಟು ಪೊರೆಯೆನಲು ಕೈಕೊಂಡನು॥೧೯
ಇರದೆ ದಾಕ್ಷಾಯಣಿಯನೋಡಿ ಸರ್ವೇಶ್ವರಂ । ಹರುಷದಿಂ ಮದುವೆ
ಯಾದಂ ಮಹಾವಿಭವದಿಂ। ದಿರುತಬೊಮ್ಮಾಂಡದಿಂ ಪೊರಗೆ ಶಿವಲೋಕ
ಮಂ ನೆನೆದಮಾತ್ರದೊಳ್ಕಾಣಿಸಿ ॥ ಒಡೆಯಲಸದಳಮಾಮಹೇಶ್ವರನ
ರಂಜಿಸುವ। ಗುರುತರಸಭಾಮಂಟಪವನದರೊಳೆಂದು ಸುಖ। ಮಿರು
ತ್ತಿರ್ದನಳ್ತಿಯೊಳು ಮಾಹೇಶ್ವರಲೀಲೆಯಿಂದೆ ಬಳಿಕೇನೆಂಬೆನು॥೨೦
ಪರಶಿವಂ ಸಕಲಬ್ರಹ್ಮಾಂಡಭರಭಾರಮಂ ಧರಿಸಿಪರ್ನೆನ್ನ ಧರಿಸು
ವರಾರೆನುತ್ತನಿ। ರ್ಧರಿಸಿ ತನ್ನಯ ಹೃದಯದೊಳಗಿರ್ದ ಧರ್ಮವಂನೆ
ನೆಯಲಾಸದ್ಧರ್ಮವೆ॥ ಪರಮತೇಜೋಮೂರ್ತಿಯಾಗಿನಿಂದಡಿಗೆ
ರಗೆ। ಕರುಣದಿಂದೆತ್ತುತೆಲೆಧರ್ಮವೇ ನಿನ್ನನಾಂ। ಧರಿಸಿಪ್ಪೆನೆನ್ನ ನೀಂ
ಧರಿಸೆನಗೆ ನಿನಗಾವಗಂ ಭಿನ್ನವಿಲ್ಲೆಂದನು ॥೨೧॥ ಪುಂಗವಾಕಾರದಿಂ

ದೆಮ್ಮನೀಂಧರಿಸೆನೆ ಪೆ| ದಂಗಳೇ ವೇದನಾಲ್ಕು ಯುಕ್ತಿಶಾಸ್ತ್ರಂಗಳು| ಷಡಂಗೆ ತನುತ್ರಯಂ ನಾದಬಿಂದುಕಲಾಳಿಯಾದಿ ಯಮುನಾದಿಯೆರಡು|| ಶೃಂಗಂ ಶಿರಂ ಪ್ರಣವಮುಖಾಸ್ಯ ಪಂಚಾಕ್ಷರಿವೃ| ಷಂಗೆ ವೇದಾಂತಂ ಪಿಣಿಲ್ಸ್ಮೃತಿಸುತೀರ್ಥವುಂ| ತ್ರಂಗಳೇ ರೋಮಂ ಶಿವಾಗಮಂ ಪ್ರಾಣಮಿಂತಾದಿವೃಷಭಂ ಮೆರೆದನು ||೨೨|| ಈತೆರದೆ ಪ್ರಣವಸ್ವರೂಪಾದವೃಷಭನಂ| ಪ್ರೀತಿಯಿಂದೇರಲ್ಕೆ ವೃಷಭವಾಹನನೆನಲೆ| ಭೂತನಾಥಂಗಾದುದುಮುಸಹಿತ ಶಿವಲೋಕದರಮನೆಯೊಳೊಲಿದಿರುತ್ತಿಂ| ಆತರಣಿಶತಕೋಟಿತೇಜನಾಗಳು ಪ್ರಮಥ| ಜಾತಮಂ ತನ್ನಿಂದೆ ಪಡೆದವಗಳೊಡನೆ ವಿ| ಖ್ಯಾತಸುಖಸಂಕಥಾಕೇಳಿಯಿಂದೊಪ್ಪಿದಂ ನಾನಾವಿಲಾಸದಿಂದಂ||೨೩|| ಇಂತೆಸವಚೆನ್ನಬಸವೇಶನ ಪುರಾಣಮಂ| ಸಂತಸದಿಬರೆದವರ್ಗೋದಿದರ್ಗರ್ಥವಾ| ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ|| ಸಂತತಂ ಸಕಲಸುಖಮುಂ ಕಸಲಭೋಗಮುನ| ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಲ್ಕರಿಂದಂ ||೨೪||

ಎರಡನೆಯ ಕಾಂಡದಲ್ಲಿ ೨ನೇಸಂಧಿಮುಗಿಯಿತು

## ೩ನೇಸಂಧಿ.

ಸೂಚನೆ|| ವರಮಹೇಶಂಗುಮೆಯನಿತ್ತು ಬಳಿಕಾದಕ್ಷ| ನಿರದೆ
ಪೆಣ್ಣರವತ್ತುಮಂ ಪಡೆಯಲವರವರ| ಪುರುಷಸಂಯೋಗದಿಂ
ದಖಿಳಸಚರಾಚರಂ ಜನಿಸಿತ್ತದೇನೆಂಬೆನು||

ಪದ|| ಪಾಪಹರವಿಪುಳಪ್ರತಾಪಘನತರಮೇರು| ಚಾಪವಿಲಯಪ್ರಬಲಕೋಪಸನ್ನುತದಿವ್ಯ| ರೂಪಮೋಹನಪುಷ್ಪಚಾಪವಿಗ್ರಹಭಸಿತಲೇಪಗಿರಿಜಾಕಲಾಪ|| ಗೋಪವಾಹನಕೃಪಾಲಾಪಸುರವಂದ್ಯನಿ| ರ್ಲೇಪವರಪುಣ್ಯಸ್ವರೂಪಜಯಪಂಪಾವಿ| ರೂಪಾಕ್ಷಭಕ್ತರಘಾಪೇಕ್ಷನತರಂ ಸದಾಪಾಲಿಸತ್ತಿಯಿಂದಂ ||೧|| ಇನ್ನಾಲಿಸೈ ಸಿದ್ಧರಾಮ ಪಂಕಜಭವಂ| ತನ್ನಸುತ ದಕ್ಷನಂ ಕರೆದು ನೀಂ ಸೃಷ್ಟಿಯಂ ಚೆನ್ನಾಗಿಮಾಡೆನಲ್ಪಂಚಜನನಾತ್ಮಜೆಯ ಸಿಕ್ನಿಯೊಳ್ದಕ್ಷನಂದು|| ನನ್ನಿಯಿಂ ಹತ್ತುಸಾವಿರಮಂದಿ ಹರಿಯಶ್ವ| ರನ್ನಲಿದು ಪಡೆದು ಸೃಷ್ಟಿಯನೆಸಗಿಸಲ್ನಾರ| ದನ್ನೋಡಿ ಸಂಸಾರಬಂಧಕೊಳಗಾಗಬೇಡೆಂದು ತಪಕ್ಕೈದಿಸಿದನು ||೨|| ಠಕ್ಕನಿನ್ನಾರದಂ ಬೋಧಿಸೆ ತಪೋವನಂ| ಬೊಕ್ಕರವರಾಕ್ಷಣಂ ದಕ್ಷನಿದನರಿದು ತಾಂ| ಮಕ್ಕಳವಿಯೋಗದಿಂದೆದೆಗಡದೆ ಮತ್ತೆ ಚಪಲಾಶ್ವರಂ ಪಡೆದಶವನು || ಮಕ್ಕಳಿರಸೃಜಿಸಿ

ನೀವೆನೆಲವಸ್ಸೃಷ್ಟಿಸುವ । ದಕ್ಕುಜ್ಜುಗಿಸೆನಾರದಂಬಂದವರ್ಗಳಂ।ಸಿ
ಕ್ಕದಿರಿದಕ್ಷನಿಕ್ಕುವಬಲೆಗೆನೀವೆಂದು ತಪಕ್ಕೈದಿಸಿದನವರನು॥೩॥ನಾ
ರದನತೌಳಿಯಿಂಬಿತ್ತಂಡದಾತ್ಮಜ । ದೂರರವಾಗಲ್ಕೆರಳಿದಕ್ಷನೆಲ
ವ್ರೋಖೂಳ।ನಾರದಮದೀಯನಂದನರನಿರಗೊಡೆಮೂರುಮೂಕಾ
ಲ್ಗಳಿಗೆಯೊಮ್ಮೆಯುಂ॥ ಧಾರುಣಿಯೊಳೆಲ್ಲಿಯುಂಸ್ಥಿರನಾಗದೊಡನೊ
ಡೆನ । ಕಾರಣಂತಿರುಗಿಜಗಳಗಳನೇಗಂಟಕ್ಕು । ಕೂರಹೋಗೆಂದು
ಶಾಪವನಿತ್ತಂಪೆಣ್ಮಕ್ಕಳಂಪಡೆಯಲನುಗೈದನು॥೪॥ ಒರವೆನಾಲಿಸು
ಸಿದ್ಧರಾಮದಕ್ಷಬ್ರಹ್ಮ । ನಿರದೆಸಿಕ್ನಿಯೊಳೈದೆಪಡೆದುಮತ್ತರುವ
ತ್ತು। ತರುಣಿಯರನಿತ್ತನಾಧರ್ಮಂಗೆಹತ್ತನಿಪ್ಪತ್ತೇಳಚಂದ್ರಮಂ
ಗೆ॥ ಗರುವಕಶ್ಯಪಗೆಹದಿಮೂರತ್ರಿಮರಿಚಿಯಾಂ। ಗಿರಸಂಪುಲಸ್ತ್ಯ
ಪುಲಹಕ್ರತುಭೃಗುವಸಿ। ಷ್ಠರಿಗೋರ್ವರಿಂಗೋರ್ವರಂಕೃಶಾಶ್ವಂ
ಗೀರ್ವರಂಕೊಟ್ಟನಳ್ತಿಯಿಂದಂ॥೫॥ ಧರ್ಮನಸತಿಯರರುಂಧತಿಯಾ
ಮೆಲಂಬಿಯು । ನಿರ್ಮಳೆಮರುತ್ವತಿಸುಭಾನುಸಂಕಲ್ಪೆಯು।ಪೆರ್
ಮೆಯುಮುಹೂರ್ತೆಸಾಧ್ಯೆಯುವಿಶ್ವೆವಸುವೆನಿಪನಾಮಂಗಳವೆ
ರಸುತರು ॥ ಕೂರ್ಮೆಯೊಳರುಂಧತಿಗೆಕಿನ್ನರಯಾರ್ಮೆಗಂ । ಕ
ರ್ಮರಹಿತಂಸಂದಿಲಂಬೆಗೆಸಿಡಿಲ್ಮಿಂಚು।ಮರ್ಮಜ್ಞೆಯಾಮರುತ್ವತಿ
ಗಂಮರುತ್ತುಗಳ್ಭಾನುವಿಗೆಸಿದ್ಧರ್ಕಳು॥೬॥ ಎಸವಸಂಕಲ್ಪೆಗಂಸಂ
ಕಲ್ಪರಾದರಾಬಿಸಜಲೋಚನೆಮುಹೂರ್ತೆಗೆಮುಹೂರ್ತರ್ಸಾಧ್ಯೆ।
ಗೆಸವೆಸಾಧ್ಯರ್ವಿಶ್ವೆಗಂದುವಿಶ್ವೇದೇವರಾವಸುವಿಗೆಂಟುಮಂದಿ॥ ವ
ಸುಗಳಾದರ್ವಸುಗಳಾಪಧೃವಸೋಮಧರ । ಸೊಸನನಸಿಖಿಪತ್ಯೂ
ಷರುಂಪ್ರಭಾಸನುಮೆನಿಪ। ಜಸವಡೆದರಷ್ಟವಸುಗಳ್ಮೇಣ್ಪ್ರಭಾಸಂ
ಗೆವಿಶ್ವಕರ್ಮಂತನುಜನು ॥೭॥ ಮರಿಚಿಸಂಭೂತೆಯಗಾರ್ದಕಶ್ಯ
ಪಗೆಸವೆ। ತರುಣಿಯರ್ಪದಿಮೂರ್ವರದಿತಿದಿತಿದನುತಾಮ್ರೆ। ವರವಿ
ನತೆಸುರಸೆಧರೆಕದ್ರುನುತಸುರಭಿಸಸೆಯಿರೇವಂತೆ ಮುನಿಯರಿಷ್ಟೆ॥
ಪರಿವಿಡಿಯುಲವರವರಸುತರನಾಮಂಗಳಾ।ತರಳೆಯರಪೇರ್ಗಳಂಕ್ರ
ಮದಿಂದೆಕೇಳೆಂದು । ಕರುಣದಿಂಚನ್ನಬಸವೇಶ್ವರಂಸಿದ್ಧರಾಮಂಗೆ
ಮಗುಳಿಂತೆಂದನು॥೮॥ಧಾತನರ್ಯಮನಂಶುಮಾನ್ವರುಣನಿಂದ್ರಮ
ಹಾತಿಬಲಮಿತ್ರಂರವಿತ್ವಷ್ಟ್ರವಿಷ್ಣುಸಂ। ಜಾತಗುಣನಿಧಿವಿವಸ್ವತನೆ
ಸವಪೂಷನಾಪರ್ಜನ್ಯನೆಂಬಿನಿಬರು ॥ ಖ್ಯಾತರಾದ್ವಾದಶಾದಿತ್ಯ
ರವರೊಳಗೆಪುರು। ಹೂತಶಚಿಯುಗರ್ವಿದುಷಂಜಯಂತಂಋಷಭ।
ರೋತುಸಂಭವಿಸಿದರ್ವರುಣಂಗೆವಾಲ್ಮೀಕಿಮುನಿವರಂಸುತನಾದ

ಸೂ॥ಶ॥ ಆವಿವಸ್ವತಸಂಜ್ಞೆಗಳ್ಗೆಸಂಭವಿಸಿದ । ವೈವಸ್ವತಂಯಮಂ
ಯಮುನೆಯುಂಛಾಯೆಯೊಳ್। ಸಾವರ್ಣಿಶನಿತಪತಿಗಳ್ಜನಿಸಿದರ್ಸಂ
ಜ್ಞೆಗಾದವರಭಾಕೃತಿಯೊಳು ॥ ತಾವಾದರಶ್ವಿನೀದೇವತೆಗಳೀರ್ವ
ರುಂ । ಭಾವಿಸಲುನಿಮಿಯಶಾಪದೆಮಿತ್ರವರುಣರ್ಗೆ । ದೇವಾಂಗ
ನಾಸಂಗದಿಂವಸಿಷ್ಠಾಗಸ್ತ್ಯರುದಿಸಿದರ್ಕುಂಭದಿಂದಂ ॥೧೦॥ ದಿತಿಯಾ
ತ್ಮಜರ್ಹಿರಣ್ಯಕಶಿಪುಹಿರಣ್ಯಾಕ್ಷರ್ । ರತಿಭಯಂಕರರೂಪೆಸಿಂಹಿಕೆ
ಯೆನಿಪ್ಪೀರ್ವರ್ಸ। ಸುತೆಯರಾಗಳಾಹಿರಣ್ಯಕಶಿಪುವಿನುದರದೊಳುವತ
ಪ್ರಹ್ಲಾದಮುಖ್ಯ ॥ ಸುತಸಹಸ್ರಂಪ್ರಹ್ಲಾದಶಿಷ್ಯಾಳಿಯ। ರ್ಗ
ತಿಶಯವಿಲೋಚನನಿಕುಂಭಕುಂಭರ್ಜನಿಸ।ಲತುಳಸಾಹಸಿವಿಲೋ
ಚನಗೆಬಲಿಯಾಬಲಿಗೆಬಾಣಾಸುರಂಜನಿಸಿದಂ ॥೧೧॥ ಪರಿಕಿಸಲ್ಬಾ
ಣಂಗೆಧನದೆಗಂನಮುಚಿಸಂ । ವರಣನುಂವಿಪ್ರಜಿತುವಂಪುಲೋಮಾ
ದಿಖಳೆ। ರಿರದೆಸಂಜನಿಸಿದನಾಗಲ್ವಿಕತ್ತುಮಂದಿಯಾಸಿಂಹಿಕೆಗೆವಿಪ್ರಜಿ
ತುಗೆ ॥ ನರಕಸೊಭಾರ್ನುವಾತಾಪಿಲ್ವಲಾದಿಗ।ಳ್ಧರೆಯೊಳುದಿಸಿದ
ರೀಶವರದಿಂದಲಂಧಕಾ । ಸುರನಾಹಿರಣ್ಯಾಕ್ಷದೈತ್ಯಂಗೆಮಗನಾದ
ನೆಲೆರಾಮಕೇಳೆಂದನು॥೧೨॥ ಇಂತೆಸೆವಕನಕಾಂಬಕಂಗೆಯುಂಪದಾ
ನವಿಗೆ। ಸಂತಾಪನಂಶಕುನಿಜರ್ಝರಮಹಾನಾಭ । ಮುಂತಾದವ
ರ್ದನುವಿಗುದಿಸಿದರ್ತ್ತಾರಕವಿದಾತಮಯಶಂಬುಶಿರರು॥ ಅಂತಕೋಪ
ಮಗಗನಮೂರ್ಧ್ನಶಕುನಿವಿವಾದ। ಮುಂತೆಶತಮಾಯವೃಷಪರ್ವವಿ
ದ್ರಾವಣಸು । ರಾಂತಕಮರೀಚಿದುಂದುಭಿವಿರೂಪಾಕ್ಷರುಗ್ವಜ್ರನಾ
ಭಾದಿಖಳರು॥೧೩॥ ಶರಭಗಜಶಿರನಮುಚಿವಿಪ್ರಜಿತುಕಪಿಲಶಂ।ಬರ
ಹಯಗ್ರೀವವೈಶ್ವಾನರಶ್ವಬಲನುಂ।ದುರುಳವಾಮನಕೇತುವಿಕ್ಷೋ
ಭಣಾದಿಗಳುನೂರ್ವರಾದರುತಾಮ್ರೆಗೆ॥ ಖುರವೊಂದನುಳ್ಳಖರತುರ
ಗಾದಿಗಳ್ಪಕ್ಷಿ। ಪರಿಯಾಯುವಿನತೆಗರುಣಂಗರುಡನುಂತನುಜ। ರರು
ಣಶೋಣಿಕೆಯರ್ಗೆಸಂಪಾತಿಯುಂಜಟಾಯುವುಮೆಂಬರುದಯಿಸಿದ
ರು ॥೧೪॥ ಸುರಸೆಗಂಪಲವುಪಕ್ಷಂಪಲವುಶಿರಮನು।ಳ್ಳುರಗಂಗಳೊಂ
ದುಸಾವಿರಮುದಿಸಿದವುಕದ್ರುವಿ। ಗುರುಪತಿಶೇಷವಾಸುಗಿಕಂಬಳಾ
ಶ್ವತರರೆಸವಕರ್ಕೋಟಕಾಳಿ॥ ನಿರುಪಮವಿಷದಶಂಖಪಾಳತಕ್ಷಕಸ
ನಿಷ್ಠುರಮಹಾಕರ್ಕೋಟಮಣಿಯಾದಿಯಾದಸಾ। ಶಿರಫಣೀಂದ್ರರ್ಜ
ನಿಸಿದರ್ಧರೆಗೆಸಿದ್ಧಸಾಧ್ಯರ್ಕ್ಕಮಾರಕರಾದರು॥೧೫॥ ಸುರಭಿಗಮೃತಂ
ಕಾಮಧೇನುವುಂಪಶುಗಳುಂ । ನಿರುತಮಹರ್ಷಿನಿಕರಮಪ್ಸರಸ್ತ್ರೀ
ಯರುಂ । ತರತರದೊಳಿಳಾದ್ರಿರೆಯೆಂಬಳಿಗೆಗಿರಿತರುಲತಾನಿಕರಮುಂ

ದ್ಭವಿಸಿತು॥ ತರುಣಿ ಸಸನೆಗೆಯುಂ ಯಕ್ಷರಾಕ್ಷಸರ್ಜನಿಸಿದ। ರ್ಪುರವು ಮಾ
ನಿಗ್ರೈರಾವತಾದಿ ಕರಿಜಾತಿಯುಂ। ಹರಿಮುಖ್ಯ ಮೃಗಕುಲಂ ಕ್ರಿಮಿಕೀ
ಟಝಷಾದಿಗಳುಂ ಜಲಚರಗಳುದಯಿಸಿದವು॥೧೬॥ ದಿತಿಯೊಳ್ಮರುದ್ಗಣವ
ರಿಷ್ಟೆಗಂ ಗಂಧರ್ವ್ವತತಿಯಾಯ್ತು ರಾಮ ಕೇಳ್ಕಶ್ಯಪನದೆಸೆಯಿಂದ। ಮ
ತುಳತರ ಸೃಷ್ಟಿಯಾದುದು ಮುಂದೆ ಕೇಳತ್ರಿಯನಸೂಯೆಗೊಗೆದರಂ
ದು॥ ಸುತ ಚಂದ್ರದತ್ತದುರ್ವ್ವಾಸನಂಗೀರಸಂ। ಸ್ಮೃತಿಗೆ ಗುರು ಸಂವರ್ತನ
ಯೋಗಸಿದ್ಧಿಗಳೆಂಬ। ಸುತರಾದರಾ ಪುಲಸ್ತ್ಯ ಪ್ರೀತಿಗಳ್ಗುದಿಸಿದಂ ವಿಶ
ವಸ್ಸುವಾಗ॥೧೭॥ ದೇವವರ್ಣೆಗೆ ಧನೇಶಂ ಸುತಂ ಕೈಕಸೆಗೆ। ರಾವಣಂ
ಕುಂಭಕರ್ಣಂ ವಿಭೀಷಣನೆಂಬ। ಮೂವರುಂ ಶೂರ್ಪನಖಿಯುಂ ರಾವಣಾ
ನತಾಯ ಪಿತೃವಂಶವೆಂತುಟೆನಲು॥ ಭುವಿಸಲ್ಕ ಜನೊಂದುಕೋಣಾ
ಸನಿರ್ಮಿಸಲದರೊ। ಳೇವಿಗಡ ಹೇತಿಪ್ರಹೇತಿಯೆಂಬವರಾದ। ರೇವೇ
ಳ್ವಿನಾ ಪ್ರಹೇತಿಗೆಯುಮನೆಗಂಗು ವಿದ್ಯುತ್ಕೇತು ಮಗನಾದನು॥೧೮॥
ಆತನ ಧರ್ಮಾಂಗಿ ಸಂಧ್ಯಾದೇವಿಗುದಿಸಿದಂ। ಪಾತಕರಹಿತನೀಶಭಕ್ತಂ
ಸುಕೇಶಿಮು। ತ್ಪಾತು ತಂಗೆ ದೇವವತಿಗಾದ ಸುಮಾಲಿಯಂ ಮಾಲಿಯುಂ
ಮಾಲ್ಯವಂತಂ॥ ಈತೆರದ ಮಾಲಿಯ ನಿಲಾಖ್ಯೆಗೆ ಕೈಕಸೆಯು। ಮಾ
ತಳೋದರಿ ವಿಶ್ರವಸು ಕಾಂತೆ ರಾವಣನ। ಮಾತೆಯೊಪ್ಪುವ ವಂಶವಿ
ದು ಪುಲಹಗುದಿಸಿದ ಕಿನ್ನರ ಕಿಂಪುರುಷರು॥೧೯॥ ಕ್ರತುಗೆ ಸನ್ನು
ತಿಗೆ ಸಚರಿಪ ತಂಗಸುರ್ತ। ಸರ್ತಿ ಪುಲೋಮಿಗೆ ಭೃಗುವಿಗು ಶನಕ
ವಿಚವನರ್ಕ। ಳತುಳ ಕವಿಗಂ ಶುಕ್ರನಾದನಾ ಚವನ ಕರ್ಣಕೆಯೊಳೋ
ರ್ವಂಜನಿಸಿದಂ॥ ಸುತನಾದ ಸಾತಂಗೆ ರುಚಿಕನಾ ರುಚಿಕಂಗೆ। ಸುತ
ನಾದನೊಲ್ಪು ಜಮದಗ್ನಿಯಾತಂಗೆ ವಿ। ಶ್ರುತ ಪರಶುರಾಮನಾತಂಗಳಿ
ಯನೆಸವ ವಿಶ್ವಾಮಿತ್ರಮುನಿನಾಥನು॥೨೦॥ ವರವಸಿಷ್ಠನಸತಿಯ
ರುಂಧತಿಯು ಗರ್ಭದಿಂ। ಬರದುದಯಿಸಿದ ಶಕ್ತಿಯಾತಂಗೆ ಮುನಿಪ। ರಾ
ಶರನವಂಗುದಿಸಿದಂ ವ್ಯಾಸನಾತಂಗೆ ಶುಕಯೋಗಿ ಸಂಭವನಾದನು॥
ಹರುಷದಿಂ ಕರ್ದಮಂ ದೇವಹೂತಿಯೆನಿಪ್ಪ। ತರುಣಿಯೊಳ್ಕಪಿಲ
ಕರ್ನಕೆಯರಂ ಪಡೆದುತ। ತ್ತರಳೆಯಂ ಕೊಟ್ಟಂ ಪ್ರಿಯವ್ರತಂಗಾತಂ
ಗೆದಶತನುಜರುದಯಿಸಿದರು॥೨೧॥ ಅವರಗ್ನಿಬಾಹು ಮೇಧನುಂ
ಪುತ್ರನುಂ। ಸವನ ಜ್ಯೋತಿಷ್ಮಾನು ವರವಪುಷ್ಮಾನುಗ। ಳ್ವವರಿಸ
ಲ್ಮೇಧಾತಿಥಿಯುಗ್ನೀಂದ್ರ ಹವ್ಯ ದ್ಯುತಿಮಾನುವೆಂಬವರದರೊಳು॥ ತವೆ
ಮೊದಲ ಮೂವರುಂ ಯತಿಗಳಾದರ್ಮ್ಮುಂದೆ। ಧೃವನಾದನುತ್ತಾನಪಾ
ದಭೂಪಂಗೆ ಸಂ। ಭವಿಸಿದ ಧರ್ಮಕೇತ್ವಾದಿಗಳ್ ತತ್ಕ್ರಶಾಕ್ಷ್ವಂಗ

ಚರ್ಯೆಯೆಂಬವರೊಳು ||೧೨|| ರಾಮ ಕೇಳಿನ್ನು ಧರ್ಮನ ಸೃಷ್ಟಿಯು
ಮನವನ | ಭಾಮೆ ಮೃಷೆಯೊಳು ಡಂಬನುಂ ಮಾಯೆಯುಂ ಬಂದ|
ರಾಮಾಯೆಗನ್ನಿರುತ್ರಿಗಂ ಲೋಭ ವಿಕೃತಿಗಳ್ಪುಟ್ಟಿದವು ತಲ್ಲೋಭಕೆ||
ಭೂಮಿಯೊಳ್ಕ್ರೋಧಮುದಿಸಿತು ವಿಕೃತಿಗಂ ಹಿಂಸೆಯಾ | ಮಹ
ಕ್ರೋಧಕ್ಕೆ ಹಿಂಸೆಗೆ ದುರುಕ್ತಿ ಮ| ತ್ತಾ ಮಹಿಳೆಯಾ ಕಲಿ ದುರುಕ್ತಿಗಳಿ
ಗಂ ಭಯಂ ಮೃತ್ಯುವೆಂಬವರಾದರು ||೧೩|| ಜಗದೊಳಾ ಭಯ ಮೃ
ತ್ಯುಗಳ್ಗೆ ನಿರಯಂ ಯಾತ| ನೆಗಳುದಿಸಿದವು ನಿರಯ ಯಾತನೆಗಳಿಂದ
ಮೇ| ಣೊಗು ಮಿಗೆಯ ದುರ್ನೀತಿ ದುರ್ಮಾರ್ಗ ಕಪಟ ಕುತ್ಸಿತ ಮಹಾ
ದ್ರೋಹಂಗಳು|| ಮಿಗೆ ತಕ್ಕೌಳಿ ವಂಚನೆ ದುರ್ಜನತ್ವ ಸಂ| ಯುಗವಿ
ಕೃತಿ ರೋಧ ಸಂತಾಪ ಬಲ್ಮೆ ನಿಸುಹಾ| ನಿಗಳುದಿಸಿದವು ರಾಮ ಕೇಳು
ಧರ್ಮ ಬ್ರಹ್ಮನುರು ಸೃಷ್ಟಿಯಿನಿತೆಂದನು ||೧೪|| ಪರಶಿವಂಗುರೆ ವೀರಭ
ದ್ರ ಶಂಭು ಗಿರೀಶ| ಪರಮ ಚೈತನ್ಯ ಪಶುಪತಿಯಹಿಬುಧ್ನ್ಯನುಂ| ವ
ರದಿಶಾಂಪತಿ ಪಿನಾಕಿ ಸ್ಥಾಣು ಭವರೊಪ್ಪುತಿರ್ಪ ಭುವನಾಧೀಶ್ವರು|| ಪ
ರಿಕಿಸಲ್ಕೇಕಾದಶ ರುದ್ರರಾದರಾ| ಮರಿಚಿ ಕಸ್ಯಪ ಗೌತಮಾತ್ರಿ ವಿ
ಶ್ವಾಮಿತ್ರ| ಪರಮ ಮುನಿ ಜಮದಗ್ನಿ ನುತ ವಸಿಷ್ಠ ಸಪ್ತಋಷಿವರ
ರ್ಕೇಳೆಂದನು ||೧೫|| ಪಾವನ ಚರಿತ್ರ ಸ್ವಯಂಭು ಸಾರೋಚಿ ಮಿಗೆ|
ವೈವಸ್ವತೋರುತರ ಸಂವೃತ್ತ ಮುತ್ತಮನು| ರೈವತ ತಾಮಸ ಚಾಕ್ಷು
ಷಾಚ್ಯ ಚೌಚ್ಯ ಬ್ರಂಹಸಾವರ್ಣಿ ಸುಗುಣನೆನಿಪ| ಆವಿಮಲ ರುದ್ರಸಾ
ವರ್ಣಿ ಮತ್ತಂ ದಕ್ಷಸಾವರ್ಣಿ ಯಗ್ನಿ ಸಾವರ್ಣಿ ಪೇಳ್ವೆಂ ಸೂರ್ಯ|
ಸಾವರ್ಣಿಯಿಂತೆ ಸವ ರೀರೇಳು ಮಂದಿ ಮನುಗಳು ರಾಮ ಕೇಳೆಂದ
ನು ||೧೬|| ಇಂತೆಸವ ಚೆನ್ನಬಸವೇಶನ ಪುರಾಣಮಂ| ಸಂತಸದಿ ಬರದ
ವರ್ಗ್ಗೋದಿದರ್ಗರ್ಥಮಾದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭ
ಕ್ತಿಯಿಂ ಕೇಳ್ದವರ್ಗೆ|| ಸಂತತಂ ಸಕಲಸುಖಮಂ ಸಕಲಭೋಗಮನ|
ಸಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ | ಕಂತುಹರನ ಪರಾವ
ತಾರನೆನಿಸುವ ಚೆನ್ನಬಸವೇಶನಕ್ಕರಿಂದಂ ... ||೧೭||

ಎರಡನೆಯ ಕಾಂಡದಲ್ಲಿ ೩ನೇ ಸಂಧಿ ಮುಗಿಯಿತು

## ೨ನೇ ಕಾಂಡ ೪ನೇ ಸಂಧಿ.

ಸೂಚನೆ|| ಶಿವನಾಜ್ಞೆಯಿಂದ ಚರಾಚರವನಂಬುರುಹ | ಭವ
ನೈದೆ ಸೃಜಿಸಿ ನೆಲೆಯಂ ಚತುರ್ದಶಭುವನ | ಭವನದೊಳು ಕೈ
ಗೈದು ತಚ್ಚರಾಚರವನಿರದೆಡೆಯೆಡೆಯೊಳಿಂಬಿಟ್ಟನು||

ಪದ|| ಪರಮಗುಣನಿಳಯ ಪಾವನತರ ಮಹಾಮಹಿಮ| ಪಿರಿದು

ನ್ನಿಗೆಮದೂರಪೀತಪಟನುತಚರಿತ । ಪುರಮಥನಕಥನಪೂಸರನ
ಭಜಿತಾಪೇಕ್ಷಪ್ರೈಶ್ರ್ಯಪತಿವಿಧ್ವಂಸನ ॥ ಸುರನಿಕರಪೋಷಣಮಹಾ
ಪೌರುಷಪ್ರಯುತ । ಕರುಣಪಂಪಾವಿರೂಪಾಕ್ಷಸುತಪಃಪ್ರಭಾ ।
ಪರಿಪೂರ್ಣಗಾತ್ರತ್ರಿಣೇತ್ರದಾನವಜೈತ್ರಸುಪವಿತ್ರಚಾರಿತ್ರನೆ ॥೧॥
ಆಲಿಸೈಸಿದ್ಧರಾಮೇಶಪಂಕಜಭವಂ । ಭಾಳಾಕ್ಷನಾಜ್ಞೆಯಿಂಬ್ರಹ್ಮಾಂ
ಡದೊಳಗೆಸೆ । ಲ್ಲೀಲೆಯಿಂಸಚರಾಚರಂಗಳಂಸೃಷ್ಟಿಸಿದಬಳಿಕವಕೆನೆ
ಲೆವನೆಗಳ ॥ ಮೇಲೆಕ್ಕೆಗೈದವೃತ್ತಾಂತಮಂಪೇಳ್ವೆಪೆಂ, ಕೇಳ್ಬ್ರಹ್ಮಾಂ
ಡಖರ್ಪರದಧೋಭಾಗದೋ । ಳ್ತ್ರಿಳದಿಂದಿಪ್ಪದಿಪ್ಪತ್ತೈದುಕೋಟಿ
ಯೋಜನದಜಲಮೇನೆಂಬೆನು ॥೨॥ ಇಂತೆಸವಜಲದಮೇಲಾದಿ
ಕೂರ್ಮಂಮೆರೆವ । ನಂತದರಮೇಲೆಶೇಷಂಸುತ್ತಲಿಹುದುದಿ । ಗ್ದಂ
ತಿಗಳವರಮೇಲೆಯಿಳೆಯೊಂದುಕೋಟಿಗಳ ವೈವತ್ತುಕೋಟಿಹರ
ಹಿಂ ॥ ಅಂತರದಭರಣಿಯಂತೇಳುಲೋಕಂಗಳದ । ರಂತರಂತರ
ದೊಳಿಹವವರಗಲದುನ್ನತಗ । ಳಂತಿಳಿಯೆಹತ್ತುಕೋಟಿಗಳಹರಹೀ
ರೈದುಸಾಸಿರಗಳುನ್ನತಗಳು ॥೩॥ ಇನ್ನುಮೂಲೋಕಂಗಳೆಡೆಯೆ
ಡೆಯಭೂಮಿಗ । ಳ್ಪನ್ನೆರಡುಲಕ್ಷ ಮುನ್ನಾಲ್ವತ್ತಾರ್ಸಾಸಿರದ ।
ಇನ್ನೂರವೈವತ್ತುಯೋಜನದದಳದಿಂದಲಿರ್ಪವಾಲೋಕಂಗಳ ॥
ಮುನ್ನವೇಬಳಸಿದಿಳೆ ಯಿಪ್ಪತ್ತುಕೋಟಿಹರ । ಹಿನ್ನೋಡೆಬೊ
ಮ್ಮಾಂಡದೊಂಟಿಯಂಕಟ್ಟಿರ್ಪು । ದಿನ್ನದರಮೇಲಣವಿಶಾಲಮೇಭೂ
ಲೋಕಮೆಲರಾಮಕೇಳೆಂದನು ॥೪॥ ಭೂತಳದಕೆಳಗತಳವಿತಳಸು
ತಳಂಗಳ್ತ । ಳಾತಳಮಹಾತಳರಸಾತಳಂಗಳ್ನೆಗಳೊ । ಪಾತಾಳ
ಮೆಂಬಿವೇಳ್ಲೋಕಮುಮನಡಕಿಲ್ಲಿಳಾಗಿನಿರ್ಮಿಸುತಲದಕೆ ॥ ಶತ
ತಕುಂಭಚಿತ್ರಾಯೆಯಮ್ಮಾಡಿಯೊಡತನಕೆಪ್ರೀತಿಯಿಂಶೇಷಬಲಿಮು
ಚುಕುಂದರಲ್ಲಿರಿಸಿ । ಭೂತನಾಥನನಲ್ಲಿಶಿವನೆಂದು ಪೂಜಿಸುವರಾ
ಲೋಕದಖಿಳಜನರು ॥೫॥ ವರರಸಾತಳಲೋಕಮಂಶುಭ್ರವರ್ಣದಿಂ ।
ಪರಿರಚಿಸಿವಾಸುಗಿಸುವರ್ಣಾಖ್ಯರನ್ನಿರಿಸಿ । ಪರಮೇಶನಂಶಂಭು
ವೆಂದುಪೂಜಿಸುತಿರ್ಪರಿನ್ನುಮಹಾತಳವನು ॥ ಉರುಸಿಕತವರ್ಣ
ದಿಂನಿರ್ಮಿಸಿಹಿರಣ್ಯಾಕ್ಷ । ನರಕಾಸುರರನಲ್ಲಿನೆಲೆಗೆಯ್ಯೆಶಿವನಶಂ ।
ಕರನೆಂಬನಾಮದಿಂಭಜಿಸುತಿಹುದಾಲೋಕಜನಮತುಳಭಕ್ತಿಯಿಂ
ದಂ ॥೬॥ ರಾಮಕೇಳ್ವಿಧಿತಳಾತಳಲೋಕಮನ್ನವ್ಯಾ । ಹೇಮವರ್ಣ
ಮಾತ್ರಡಿಯುದರೊಳಗೆಮಯುಕಾಲ । ನೇಮಿಗಳನೆಸವ ಕರ್ಕೋಟ
ಕಾಹಿಯನಿರಿಸೆನೀಲಕಂಠಾಹ್ವಯದೊಳು ॥ ಭೀಮನಂಪೂಜಿಸುವರ

ಲ್ಲಿಸು ತಳೆಕೆಪವಳೆ। ಧಾಮಮಂ ರಚಿಸಿ ತಾರಕಪ ಹಲ್ಲಾದರಂ। ಪ್ರೇಮೆ
ಏಂದಿರಿಸೆ ಶಂಭುವನುಮಾಪತಿಯೆಂದು ಭಜಿಸುವರ್ಲ್ಲೀಲೆಯಿಂದಂ॥೭॥
ಏತಳೆವಮಂ ನಿರ್ಮಳೆ ದ್ಯುತಿಯಿಂದೈಕ್ಯಗೇಯ್ದು। ಚತುರಾನನಂ ಶಂಖಪಾ
ಅಮುಖರಾದಘಣೆ। ಎತತಿಯಂ ಜಂಬುಕಂಬುಕದೈತ್ಯರನ್ನಿಳಿಸಿ ಹಾಟ
ಕೇಶ್ವರನಾಮದಿಂ॥ ಶಿತಿಕಂಠನಂ ಸೇವಿಸುತ್ತಿರ್ಪ್ಪರಲ್ಲಿ ಮೇ। ಲತಳೆಮಂ
ನೀಲವರ್ಣಮ್ಮಾಡಿ ನವಮುಚಿಗಂ। ಸ್ಥಿತಿಗೈದನಲ್ಲಿ ಶಿವನಮ್ಮಹಾದೇವ
ನೆಂದರ್ಚಿಸುವರೊಲವಿನಿಂದಂ॥೮॥ ಮೇಲೆ ಭೂಮಂಡಲಮದಂತರದ
ಭರಣಗಳೆ। ಮೇಲುಮುಚ್ಚಳೆವಾಂಗಿನಿಂದೊಪ್ಪುತಿಹುದಾವಿ। ಶಾಲ
ಧಾತ್ರೀಪೀಠಮಧ್ಯದೊಳ್ಕಂಗೆಸುವ ಸ್ವರ್ಣಲಿಂಗದಂತೆ॥ ಸ್ಥೂಲಮಾ
ಗಿರ್ಪುದು ಮಹಾಮೇರುಪರ್ವತಂ। ಪೇಳಲೇಂ ಸ್ವಾಯಂಭುಮನು
ಸಕಲಸಾಮ್ರಾಜ್ಯ। ಪಾಲನೆಯು ಪಟ್ಟಮಂ ಕಟ್ಟಿದಂ ಮುದದಿಂ ಪ್ರಿಯ
ವ್ರತಕುಮಾರಕಂಗೆ॥೯॥ ಹರುಷದಿಂ ಸಕಲಭೂಮಂಡಲದ ಭಾರಮಂ।
ಧರಿಸಿ ತನ್ನಯ ರಾಜ್ಯದೊಳು ದಿವಾಕರಕಿರಣ। ಪರಿವರ್ತನಂ ಬೇಡ
ಮುದ್ದೀಹ ಕಾಂತಿಯೇಸಾಕೆಂದು ಸುರಗಿರಿಯನು॥ ವರರಥಾರೂಢ
ನಾಗೇಳ್ಸಾರಿಯೊಳು ಸುತ್ತಿ। ಬರಲೊಂದು ಗಾಲಿಯೈದಿದ ತಾಣದೊ
ಳೆಗೊಂದು। ಪರಿಯಲಾ ಮಧ್ಯದೊಳಗಿಂತು ಸಪ್ತದ್ವೀಪ ಸಪ್ತಶರಧಿ
ಗಳಾದವು॥೧೦॥ ಲಕ್ಷ ಜಂಬೂದ್ವೀಪಮಾ ಲವಣಸಾಗರಂ। ಲಕ್ಷಯೋ
ಜನದಳತೆಯುದರೊತ್ತಿನೊಳಗೆರಡು। ಲಕ್ಷಯೋಜನದೊಳ್ ಪ್ಲಕ್ಷ
ಮನಿತಿಕ್ಷುನಿಧಿ ನಾಲ್ಕು ಲಕ್ಷಂ ಶಾಲ್ಮಲಿ॥ ಈಕ್ಷಿಸೆ ಸುರಾಶರಧಿಯಾ ಪ್ರ
ಮಾಣವೆಂಟು। ಲಕ್ಷಂ ಕುಶದ್ವೀಪಮಂತೆ ಸವಸರ್ಪಿಮಿಗೆ। ಲಕ್ಷ
ಮೀರೆಂಟು ಕ್ರೌಂಚದ್ವೀಪಮಾಗಣನೆ ದಧಿಶರಧಿ ಕೇಳೆಂದನು॥೧೧॥
ಬಿತ್ತರದೊಳೆಸೆವ ಶಾಖಾದ್ವೀಪದಳತೆಮೂ। ವತ್ತೆರಡು ಲಕ್ಷಯೋ
ಜನದಳತೆ ಪಯಶರಧಿ। ಸುತ್ತಿಕೊಂಡಿರ್ಪುದಾ ಲಕ್ಕದಿಂದಾ ಕ್ಷೀರವಾ
ರಿಧಿಯನೊಳಗುಮಾಡಿ॥ ಉತ್ತಮದ ಪುಷ್ಕರದ್ವೀಪಮರುವತ್ತನಾ।
ಲ್ಕುತ್ತಿನೊಳಗೊಪ್ಪುವಾ ಸ್ವಾದೋದಕಾಂಬುನಿಧಿ। ಮತ್ತದರ ಪ
ರಿಗಣನೆಯಿಂತು ಸಪ್ತದ್ವೀಪ ಸಪ್ತಶರಧಿಗಳೆಹರವು॥೧೨॥ ಇರದೆ ಸಪ್ತ
ದ್ವೀಪಸಪ್ತಶರನಿಧಿಗಳಂ। ದೆರಡುವರೆ ಕೋಟಿ ಮೂಲರ್ಕ್ಕವರೆ ಸ್ವ
ವರ್ಣ। ಧರಣಹತ್ತುಂ ಕೋಟಿ ನೋಡೆ ಲೋಕಾಲೋಕಪರ್ವತಂ ಪ
ತ್ತುಕೋಟಿ॥ ಗಿರಿಯ ಹೊರಭಾಗದ ಮಹಾಂಧಕಾರಂ ತಿಳಿಯ। ಲೆರ
ಡುಕೋಟಿಯು ಮೇಲೆ ನಾಲ್ವತ್ತುಮರು ಲಕ್ಷ। ವರೆಯಿಂತು ಮೇರುವಿಂ
ದಿತ್ತಲಿಪ್ಪತ್ತೈದು ಕೋಟಿಯೋಜನಗಹರವು॥೧೩॥ ಇನ್ನಾಕಿಸೆ

ರಾಮ ಸವನನುಂ ಹವ್ಯದುತಿ। ಮಾನುಜ್ಯೋತಿಷ್ಮಾನುವರವಪುಷ್ಮಾ
ನುಗ। ಳಿನ್ನುತಂಮೇಧಾತಿಥಿಯಗ್ನೀಂದ್ರರೆಂಬರೇಳ್ಮಂದಿಸುತರಿರಲವ
ರ್ಗೆ ॥ ಮುನ್ನಣೆಯೊಳಾಪ್ರಿಯವ್ರತಮಹೀಪಾಲಕಂ। ಮುನ್ನಪೇ
ಳ್ದಾದ್ವೀಪದೊಳು ಪುಷ್ಕರಾದಿಗಳ। ನುನ್ನತಪ್ರೀತಿಯಿಂದೀಯೆ ಜಂ
ಬೂದ್ವೀಪಕಗ್ನೀಂದ್ರನರಸಾದನು॥೧೪॥ ಪರಿಗಣಿಸಲಗ್ನೀಂದ್ರನಂದ
ನನಾಭಿಕಿಂ। ಪುರುಷರುಂ ಹರಿಯುಮಿಳಾವೃತರಮ್ಯಕಮರ್ತ್ತೆ। ಮೆ
ರಹಿರಣ್ಮಯಕುರುನೃಪನೆಗಳ್ಭದ್ರಾಶ್ವಕೇತುಮಾಲ್ಯಾದಿಗಳ್॥ ಧ
ರೆಯನೊಂಬತ್ತುಭಾಗಂಮಾಡಿಕೊಡಲವರ। ವರಪೆಸರ್ಗಳೆವಕಾದ
ವುನಾಭಿಗಂವೃಷಭ। ಧರಣಿಪತಿಯಾತಂಗೆಭರತನಾತನಪೆಸರುಭರ
ತಖಂಡಮುದಾದುದು॥೧೫॥ ಸುರಗಿರಿಯತೆಂಕಣದಿಶಾಭಾಗದೊಳಗಿ
ರ್ಪ। ಭರತಖಂಡದಭೂಮಿತಿಳಿಯೆ ಹನ್ನೆರಡುಸಾ। ವಿರದವಿಸ್ತೀರ್ಣ
ಮುದುಬಿಲ್ಲಂತೆಮೂರುದಿಕ್ಕಿಂಗೆಲವಣಾಬ್ಧಿವಾರಿ॥ ಪರಹಿಮಾಚಲ
ವದರಬಡಗಪೂರ್ವಾಪರದ। ಶರಧಿಗಾಂತೆರಡುಸಾವಿರದುದ್ದಮಗಲ
ಸಾ। ಸಿರದಿಂದಲೊಪ್ಪುವುದು ತತ್ಖಂಡಮುದುಚಿತ್ರವರ್ಣದಿಂರಂಜಿಸು
ವುದು ॥೧೬॥ ತಂಪುವಟ್ಟದಬಡಗಭಾಗದೊಳಗೊಪ್ಪುವುದು। ಕಿಂ
ಪುರುಷವರುಷಮೇಕಾದಶಸಹಸ್ರದಗೆ। ಲಿಂಪೊಳೆವಕನಕವರ್ಣಂ
ನೀಳವಾಗಿಪೂರ್ವಾಪರಾಬ್ಧಿಯೆಂಗಡಿಯೆನೆ॥ ಸೊಂಪಿನಿಂದಿಹುದು
ಹೇಮಾದ್ರಿಯುದರುತ್ತರದೊ। ಳೆಂಪೇಳ್ವಿನಾಶೈಲದುದ್ದವೊಂದೇ
ಸಾಸಿ। ರಂಪೆರಪದೈನೂರುಯೋಜನಂಪೇಳಲೇನದರಸೌಖ್ಯಸ್ಥಿತಿ
ಯನು॥೧೭॥ ಹೇಮಶಿಖರಿಯುಬಡಗಲೊಪ್ಪುವುದು ಹರಿವರುಷ ಭೂ
ಮಿದಶಸಾಹಸ್ರಯೋಜನಂಕಾಂತಿಯುಂ। ಹೇಮವರ್ಣಂಮೂಡು
ಪಡುವಣಸಮುದ್ರಗಡಿಯುದ್ದಸಾಸಿರಯೋಜನಂ ॥ ಆಮೇಲಣಗಲ
ವೈನೂರರಿಂನಿಷಧಗಿರಿ। ಸೀಮೆಯಾಗಿಹುದುಬಡಗಣದಿಕ್ಕಿನೊಳು
ಸಿದ್ಧ। ರಾಮಕೇಳಿನ್ನಿಳಾವೃತದವಿಸ್ತಾರಮಂನೀನೆಂದು ನಿರವಿಸಿದ
ನು ॥೧೮॥ ಕನಕಾಚಲದಚತುರ್ಭಾಗದೊಳಿಳಾವೃತಂ। ಕನಕಮ
ಯಭೂಮಿಯಿಂದಿಹುದದರಬಡಗದಿ। ಕ್ಕಿನೊಳೆಸವನೀಲಾಚಲಂ
ಮೇರೆತೆಂಕನಿಷದಾಚಲಂಗಡಿಪಡುವಲು॥ ಘನಗಂಧಮಾದನಂಕಡೆ
ಮೂಡಮಾಲ್ಯವಂ। ತನಿಪದ್ರಿಯೊತ್ತಾಗೆತಗ್ಗಿರಿಯನಾಲ್ಕುದಿ। ಕ್ಕಿ
ನೊಳಿರದೆಮಂದರಂಮೊದಲಾಗಿ ನಿಷ್ಕಂಭಗಿರಿಚತುಷ್ಟಯಮಿರ್ದು
ದು ॥೧೯॥ ನೀಲಗಿರಿಯೊಂದುಸಾಸಿರದುದ್ದಮನಿತೆವೈ। ಶಾಲಮುದ
ರುತ್ತರದೊಳೆಂಹತ್ತುಸಾವಿರದ। ನೀಳದಿಂದಪರಪೂರ್ವಾಬ್ಧಿಗಡಿ

ಯಾಗಿಹುದುರಮ್ಯಕಂಕನಕವರ್ಣಂ ॥ ಪೇಳೆಲೇನದಕವಧಿಯಾಗಿ
ಬಡಗಲ್ಶ್ವೇತ । ಶೈಲಮಿಪ್ಪುದುಸಹಸ್ರೋನ್ನತಂತದ್ಗಿರಿಯ। ಮೇಲ
ಗಲವನಿತದರಬಡಗದೆಸೆಯೊಳುಹಿರಣ್ಮಯವರುಷಮಂಪೇಳ್ವೆನು॥
ಹನ್ನೊಂದುಸಾಸಿರದಯೋಜನದನೀಳದಿಂ । ಮುನ್ನಪೇಳ್ದಂತುಭ
ಯವಾರ್ಧಿಗಡಿಯಾಗಿಪೊಸ। ಚಿನ್ನದಂತಿರೆಕಾಂತಿಯೆಸವುದದಕವ
ಧಿಯೆಶೃಂಗಪರ್ವತಮುದಕ್ಕು ॥ ಉನ್ನತಂಸಾಸಿರಂಹರಹುಸಾಸಿರ
ವಾಗ।ಲಿನ್ನದರಬಡಗದಿಕ್ಕಿನೊಳಿಹುದುಕುರುಭೂಮಿ।ಹನ್ನೆರಡು
ಸಾಸಿರದತೆರಪಿನಿಂಪೂರ್ವಾಪರೋತ್ತರಾಬ್ಧಿಯೆಗಡಿಯೆನೆ॥೨೧॥
ಸುರಗಿರಿಯಮೂಡದಿಕ್ಕಿನೊಳಿಹುದುಭದ್ರಾಶ್ವ।ವರುಷಮದುಪೂ
ರ್ವಾಬ್ಧಿಮೇರೆಪಶ್ಚಿಮಕೆಘನ । ಗಿರಿಮಾಲ್ಯವಂತನೆಗಡಿತ್ರಯಸ್ತ್ರಿಂ
ಶತ್ಸಹಸ್ರಯೋಜನದಹರವು॥ಇರೆದಕ್ಷಿಣೋತ್ತರಕೆಮೂವತ್ತನಾ
ಲ್ಕುಸಾ।ಸಿರದಳತೆಜಠರಗಿರಿದೇವಕೂಟಾದ್ರಿಗಳು। ಪರಿಗಣನೆಗಿಪ್ಪ
ತ್ತೈಸಾಸಿರಂದಕ್ಷಿಣೋತ್ತರಕುನ್ನತಂಸಾಸಿರಂ।೨೨॥ವರಕೇತುಮಾ
ಲ್ಯವರ್ಷಂಪಶ್ಚಿಮಾಬ್ಧಿಗಡಿ।ಗಿರಿಗಂಧಮಾದನಮುಮ್ಮಡಲೊತ್ತಿಗಿಹು
ದು।ಪರಿಗಣನೆಮೂವತ್ತುಮೂಸಾರ್ಸಿರಂದಕ್ಷಿಣೋತ್ತರಕ್ಕೊಂದು
ಮಿಗಿಲು ॥ ಇರದಿಳಾವೃತಚೌಕಕೀಪ್ರಮಾಣಂಪವನ । ಗಿರಿಪಾರಿ
ಯಾತ್ರಂಗಳಿಪ್ಪತ್ತೈದುಸಾ। ಸಿರದನೀಳಂದಕ್ಷಿಣೋತ್ತರಕ್ಕುನ್ನ
ತಂಸಾಸಿರದೊಳಿರುತಿರ್ಪವು ।೨೩॥ ಹರಿವರುಷದೊಳಗೆಸವಕರ
ವೀರಕೈಲಾಸ । ಗಿರಿಗಳಿಪ್ಪತ್ತೈದುಸಾಸಿರದನೀಳದಿಂ।ದಿರುತಿರ್ಪ
ವವರಪೂರ್ವಾಬ್ಧಿಮುಖಹರಿದಂತ್ರಿಸಾಸಿರಂರಜತವರ್ಣಂ ॥ ಇರ
ದೆರಮ್ಯದೊಳಿಪ್ಪಶೃಂಗಮುಕರಮುಮೆಂಬ। ಗಿರಿಯುಗಳಮಿಪ್ಪತ್ತೈ
ಸಾಸಿರದನೀಳದಿಂ। ಏರದಪರಪೂರ್ವಾಬ್ಧಿಮುಖವಾಗಿಮೂರುಸಾ
ಸಿರಮುನ್ನತದೊಳಿಪ್ಪುದು॥೨೪॥ಹನ್ನೆರಡುಸಾಹಸ್ರಯೋಜನಪರಿ
ಪ್ರಮಾ । ಣೊನ್ನತಂನಾಲ್ಕುವರೆಸಾಸಿರದನೀಳಮಗ। ಲನ್ನೋಡೆ
ಮೂರುಸಾವಿರದಂದಮುನ್ನುಸುದರ್ಂತೆಮಂದರಮಿಪ್ಪುದು॥ಇನ್ನ
ದರತುದಿಯೊಳಿಹಕಡವದಮರಂಸಹ। ಸ್ರೋನ್ನತಂವಿಸ್ತಾರಮುಂಚೈ
ತ್ರರಥವನಂ। ತನ್ನಗದೊಳಿಹುದುಸಾಸಿರದಗಲದಿಂದಲ್ಲಿಕೊಳನೊಂ
ದುತಂಜಿಸುವುದು॥೨೫॥ ಕನಕಾಚಲದತೆಂಕಭಾಗದೋಳ್ಗಂಧಮಾ।
ದನನಗಂನಾಲ್ಕುವರೆಸಾಸಿರದನೀಳಮುಂ । ಮಿನುಮಿನುಪ ಪವಳ
ವರ್ಣಂಮೂರುಸಾಸಿರದವಿಸ್ತರಮ್ಮೇಣುನ್ನತಂ ॥ ದಿನಪಸಾಹಸ್ರ
ಮದರೊಳಗೆಜಂಬೂಕುಜಂ । ಘನಮಾಗಿಸಾಹಸ್ರಯೋಜನೌನ್ನ

ಕ್ಯದಿಂ। ದನುದಿನಂತೊಪ್ಪುರ್ದಾನೆಗಳತೋರದಪಣ್ಗಳ್ಗಾಕುಜದೊ
ಳಿಡಿದಿರ್ಪವು॥೨೬॥ ನೆಲಕೆಬಿದ್ದೊಡೆದರಸಜಾಂಬೂನದಾಖ್ಯೆಯಿಂ।
ಸಲೆಪರಿವುದಲ್ಲಿಜಂಬೂದ್ವೀಪನಾಮದಿಂ। ದಿಳೆಗೆಸಂದುದುಗಂಧಮಾ
ದನೆಂಬಾವನಂತನ್ನಾಮಸರಸಿಯಿಹುದು॥ ತಿಳಿಯೆಸುರಗಿರಿಯಪಶ್ಚಿ
ಮಭಾಗದೊಳಗೊಂದು। ನೆಲಸಿಹುದುನಿಷ್ಕಂಭಗಿರಿಮೂರುಸಾವಿರ
ದ।ಗಲಮಾರುಸಾವಿರಸ್ಥೂಲಮದು। ನಾಲ್ಕುವರೆಸಾಸಿರದನೀಳ್ವಿಹು
ದು॥೨೭॥ ಅರಳಿಯೊಂದಾಗಿರಿಯತುದಿಯೊಳಿಹುದೊಂದುಸಾ।ಸಿರ
ದುಗ್ದಮಲ್ಲಿವೈಭ್ರಾಜವೆಂಬಾವನಂ। ಸರಸಿಯೊಂದತಿನಿರ್ಮ್ಮಳೋದ
ಕದಿನೊಪ್ಪುತಿಹುದಾವನದನಟ್ಟನಡುವೆ॥ ಒರವೆನುತ್ತರದಿಳಾವೃತ
ದೊಳಗೆನಿಷ್ಕಂಭ। ಗಿರಿಮೂರುಸಾಸಿರದಹರವುತಿರಿಯಲ್ಕಹಂ। ನೆರ
ಡುಸಾಸಿರಯೋಜನೋನ್ನತಂ ನಾಲ್ಕುವರೆಸಾಸಿರದ ನೀಳ್ವಿಹು
ದು॥ ಆಳವಿಹುದದರಗ್ರದೇಶದೊಳಗುರುತರವಿ।ಶಾಲಮದರುನ್ನತಂ
ಸಾಹಸ್ರಯೋಜನಂ। ಪೇಳಲೇನ್ನಂದನವನಂಸಾವಿರದತೆರಪಿನಿಂದಿ
ಹುದುಸರಸಿಯೊಂದು॥ ನೀಳ್ವನೂರ್ಮ್ಮಹಾಭದ್ರೆಯೆಂಬಭಿಧಾನ।
ಮಾಕಿಸ್ಯೈರಾವನಿಷ್ಕಂಭಗಳನಡುವೆವಿ। ಜಾಲಯಂಲಕ್ಷಯೋಜನ
ದಪರಿಗಣನೆಯಿಂದಿಹುದುಕಾಂಚನಮಯದೊಳು॥೨೮॥ ನೆಲದೊಳ
ಗೆಪದಿನಾರುಸಾಸಿರದಯೋಜನಮ। ದಳಿಟಹುದುತೋರಮನಿತಲ್ಲಿ
ಹುದುಸಂತತಂ। ತಿಳಿಯಲ್ಕೆಮೇಲೆಚೌರಾಸಿಯೋಜನಮದುಸ್ಥೂಲ
ಬಂಕಾಣಿಸುವುದು॥ ಬಳಸಿಕೊಂಡಿಶನೆಂಟುದಿಕ್ಕಿನೊಳುದಿಕ್ಪಾಲ।
ಕುಲದನಗರಂಗಳುಂಮತದಸೂವಿನಲೆಕ್ಕ। ದೊಳಿಮೇರವುದೆಲೆಸಿದ್ಧ
ರಾಮಕೇಳಿನ್ನದರಮೇಲಣಸವಿಸ್ತರವನು॥೨೯॥ ಮೇರುವಿನಮೇ
ಲೆಚತ್ತೀಸಸಾಸಿರದವಿ। ಸ್ತಾರಮದರೊಳಗೀಶ್ವರಂಗೆಮನೆಯೊಂದಿ
ಹುದು। ಚಾರುಮಣಿಮಂಡಿತಂಧರೆಗೊಂದುಲಕ್ಷಯೋಜನದೊಳ್ಭು
ವರ್ಲೋಕವು॥ ಸೇರಿಪ್ಪುದದಕೆರವಿಯೊಡೆಯನೆರಡನೆಲಕ್ಷ। ದೂ
ರದೊಳಗಿಂದುವಿರ್ಪಮೂರುಲಕ್ಷದೊಳು। ತಾರಕಿಗಳಿಹುವೈದುಲ
ಕ್ಷದೊಳುಬುಧನಿರ್ಪನೆಲೆರಾಮಕೇಳೆಂದನು॥೩೦॥ ಧರೆಗೇಳುಲಕ್ಷ
ಯೋಜನದುಷ್ಟದೊಳುಶುಕ್ರ। ನಿರುವನವಲಕ್ಷಯೋಜನದೊಳಗೆ
ಮಂಗಳಂ। ಗುರುವಿಪ್ಪನೇಕಾದಶಪ್ರಮಾಣದಲಕ್ಷದೊಳಗೆಶನಿಹದಿ
ಮೂರರ॥ ಪರಿಗಣನೆಯಲ್ಲಿರ್ಪಪದಿನಾಲ್ಕುಲಕ್ಷದೊಳ। ಗಿರುತಿರ್ಪ
ಸಪ್ತಋಷಿವರರ್ಧ್ರುವನಿರ್ಪ। ಧರೆಗಹದಿನೈದುವರೆಲಕ್ಷಯೋಜನ
ದುಷ್ಟಮಿಂತಿವರತೆರನೆಂದನು॥೩೧॥ ಇನ್ನಬ್ಜಮಿತ್ರನಿಮ್ಮೇಲೆಹದಿನಾ

ಲ್ಕುಲಕ್ಷೋನ್ನತಸ್ವರ್ಗವಮೂರ್ಧ್ವವನಿಂದಮೇಲೆಲೆ। ಕ್ಕನ್ನೋಡೆಜೋಂ
ದುಕೋಟಿಯುಮೇಲೆವರಮಹರ್ಲೋಕಮೊಪ್ಪುವದದರೊಳು ॥ ಸ
ನ್ನುತಂಮುನಿಪಮಾರ್ಕಂಡೇಯಸಂಯುಷಿಜ । ನಂನ್ನೋಡಿಭಕ್ತಿ
ಭಾವಂಗಳಿಂದನುದಿನಂ। ಪನ್ನಗಾಭರಣಚರಣಾರಾಧನೆಗಳಿಂದಮಿ
ರ್ಪುರದನೇಂಪೇಳ್ವೆನು॥೩೨॥ ಆಲೋಕದಿಂದಕೋಟಿದ್ವಯದಯೋ
ಜನದ। ಮೇಲಿರ್ಪುದಾಜನರ್ಲೋಕಮದರೊಳುಂಮುನಿಪ। ಜಾಲಸಹಿ
ತೆಸನಸನಕಾದಿಗಳು ಶಿವಭಕ್ತಿಯೋಗದಿಂದಿರುತಿರ್ಪರು ॥ ಆಲಿಸಾ
ಲೋಕದಿನ್ನಾಲ್ಕುಕೋಟ್ಯಂಬರದ । ಮೇಲಿರ್ಪುದಾತಪಲೋಕ
ಮಾಲೋಕದಮಿ। ಶಾಲಮುನಿತದೊಳಿರ್ಪಂಕಮಲಲೋಚನಂಪೇಳೆ
ಲೇನವಧಿರವನು ॥೩೪॥ ಸತತಂತಪರ್ಲೋಕದಿಂಮೇಲೆರಂಜಿಪುದು।
ರುತುಕೋಟಿಯೋಜನಂವ್ಯಕ್ತದಿಂಕಾಂತಸಂ । ಯುತಮಾಗಿಸತ್ಯ
ಲೋಕಂಚತುರ್ವದನನಲ್ಲಿರ್ಪನತಿಹರುಷದಿಂದ॥ ನುತಸತ್ಯಲೋಕ
ದಿಂಮೇಲೆದಶಕೋಟಿಯುಂ। ಶೃತಮದೆಂಬತ್ತೈದುಲಕ್ಷಪರಿಗಣನೆ
ಯುಂ। ನತವಿನಿಹುದಾಗಸಂಬ್ರಹ್ಮಾಂಡಮಿಂತುಟ್ಯೈವತ್ತುಕೋಟಿಪ್ರ
ಮಾಣಂ ॥೩೫॥ ಸರಿಸಿರುಹಸಂಜಾತನೀತೆರದೊಳೊಲವಿನಿಂ। ವರ
ಚತುರ್ದಶಭುವನಭವನದೊಳು ನಾಗಕುಲ। ನರಸುರಾಸುರಸಿದ್ಧವಿ
ದ್ಯಾಧರಾಪ್ಸರಃಪ್ರಕರಮನುಮುನಿಮುಖ್ಯರು ॥ ಗರುಡಗಂಧರ್ವ
ಕಿಂನರಪುರುಷರೆಂಬ। ಪರಮಸಚರಾಚರಮಸುಚಿತವಿಂದೆಡೆಯೆಡೆ
ಯೊ। ಳಿರಿಸಿಯವರಿಂದೋಲಗಂಗೊಳುತ ಸುಖಸಂಕಥಾವಿನೋದ
ದೊಳಿರ್ದನು ॥೩೬॥ ಇಂತೆಸವಚನ್ನಬಸವೇಶನಪುರಾಣಮಂ। ಸಂ
ತಸದಿಬರದವರ್ಗೋದಿದರ್ಗಗ್ರಂಥಮಾ । ದ್ಯಂತಮಂಬಿಡದೆಪೇಳ್ದರ್ಗೆಪಠಿ
ಸಿದವರ್ಗೆಭಕ್ತಿಯಿಂಕೇಳ್ದವರ್ಗೆ ॥ ಸಂತತಂಸಕಲಸುಖಮಂಸಕಲ
ಭೋಗಮನ। ನಂತಸೌಭಾಗ್ಯಮಂಕೊಟ್ಟುರಕ್ಷಿಸುವನಾ । ಕಂತು
ಹರನಪರಾವತಾರನೆನಿಸುವಚನ್ನಬಸವೇಶನಕ್ಕರಿಂದಂ ॥೩೭॥

ಎರಡನೆಯಕಾಂಡದಲ್ಲಿ ೪ನೇ ಸಂಧಿ ಮುಗಿಯಿತು.

ಚನ್ನಬಸವಪುರಾಣವು—೨ನೇಕಾಂಡ—೫ನೇಸಂಧಿ

ಸೂಚನೆ॥ ಹರಿಯಜರುಹಮ್ಮಿನಿಂತಮ್ಮೊಳಗೆತಾವುಮು । ತ್ತ
ರಿಸಿಕಾದುತ್ತಿರಲುಸಕಲಜಗಮಳಿಯಲಂ । ಧುರುಲಿಂಗಮು
ದ್ಭವಿಸಲವರಹಂಕಾರಂಗಳುಮುರಿದವಾಕ್ಷಣದೊಳು॥

ಪ॥ ಗಿರಿರಾಜನಂದನಾಮುಖಸರೋಜಭ್ರಮರ । ಗಿರಿರಾಜ
ನ್ಸ್ರಂದನಾನಿಟಲಮೃಗಮದತಿಲಕ। ಗಿರಿರಾಜನಂದನಾರಾಗೋಷ್ಟಬಿಂ

ಬಫಲಚುಂಬನೋತ್ಪುಳಕಶರೀರ ॥ ಗಿರಿರಾಜನಂದನಾಕನತ್ತಾಟಂ-
ಕಯುಗ । ಗಿರಿರಾಜನಂದನಾಕುಚತರಳಮಣಿಹಾರ । ಗಿರಿರಾಜ
ನಂದನಾರ್ಧಾಂಗ ಕರುಣಾಪಾಂಗ ಜಯವಿರೂಪಾಕ್ಷಲಿಂಗ ॥೧॥ ರಾ
ಮಕೇಳೊಂದು ದಿವಸಂ ಕಮಲಸಂಭವಂ । ರಾಮಣೀಯಕಸಭೆಯೊ
ಳಗೆ ರತ್ನನಿಕರಾಭಿ । ರಾಮಮೆಂದೆನಿಪ ಸಿಂಹಾಸನದೊಳೊಡ್ಡೋ
ಲಗದ ಪುತ್ರಪೌತ್ರರೆನಿಪ ॥ ಕಾಮರೂಪಿಗಳಾದ ಮನುಮುನಿಕ್ರ
ತುಭುಜರ್ । ಕಾಮಬಲವದ್ರಾಕ್ಷಸಾಳಿಕೃತಸುಸ್ತೋತ್ರ । ಕಾಮ
ನಿರ್ಘ್ನನೀನೆ ಸಕಲಜಗದೊಡೆಯನೆಂದಾ ಜನಂ ನುತಿಸುತಿರಲು ॥೨॥
ಆವನಿಂದಖಿಳಜನಜನನಸ್ಥಿತಿಪ್ರಳಯ । ದಾವನಿಂ ಸುಜನದುರ್ಜನರ
ಕ್ಷೆಶಿಕ್ಷೆಗಳ್ । ದಾವನಾಜ್ಞೆಯೊಳಖಿಳಲೋಕಪಾಲಕರಿರ್ಪ್ಪರತಿಕಲಾವ
ತಿಶಾರದೆ ॥ ಆವದೇವಂಗೆ ವಲ್ಲಭೆ ದೇವ ಮನುಮುನಿಗ । ಳಾವದೇವನ
ಪುತ್ರಪೌತ್ರರಂತೆಸವವರ । ದೇವನೀನೇನಿನಗೆ ದೇವರಿಲ್ಲೆಂದಾಸ
ಭಾಸದರ್ನುತಿಯಿಸಿದರು ॥೩॥ ಎಂದು ಕೊಂಡಾಡಲ್ಕೆ ಸಂಸ್ತುತಿಯೊಳೆ
ಬುಜಭವ । ಮುಂದುಗಾಣದೆ ತನ್ನ ಸಂಪದಕ್ಕಾಸರ್ಟ ಯೆಂದು
ತನ್ನಂತಾನೆ ಪೊಗಳಿಕೊಳಲು ಜನಸತ್ಯಲೋಕಮಳಿವುತಿರಲು ॥ ಕಂ
ದರ್ಪಜನಕನರಿವಾಕ್ಷಣದೊಳಜನೆಡೆಗೆ । ಬಂದು ನಿಂದಿರಲು ತುಳಗರ್ವ
ದಿಂ ನೀನಾವನೆಂದು ಕೇಳಲ್ಕೆ ಗುಳ್ಳಗೆ ಮಿಸುಗುತಿರಲಂದು ಕಮಲಾ
ಕ್ಷನಿಂತೆಂದನು ॥೪॥ ಕುರಿಯ ಬಾ ಬೊಮ್ಮ ನೀಂ ಲೋಕಕಂ ನಿನಗವಾ ।
ನೆರೆಯನಾಗಳೆ ಮರದೆಯಾತವಸಭಾಸಗ । ಕ್ಕೆರೆಪೋಗಳೆ ನಿನಗಸಂಕಾ
ಶವಾದುದೆ ಬೇಡವೆನೆ ಕಮಲಜಂ ಕನಲ್ದು ॥ ಮಿರುಪಮಣಿಖಚಿತಸಿಂ
ಹಾಸನದ ಸುತ್ತಲುಂ । ತುರುಗಿದ ಸುರವ್ರಜದ ಮಧ್ಯಗೋಳ್ಮೆರವಮಂ ।
ಕುರಿಯೊ ವಿಕ್ರಯಶೇಷನೋಷನಂತಿರ್ಪ ವಂ ಕುರಿಯೊ ನೀಂ ಪೇಳೆಂ
ದನು ॥೫॥ ಕೇಳ್ದೈ ಮನುಮುನಿಗಳಿತೆ ನಮ್ಮ ಹಾಹಾಸ್ಯ । ದಾಳಾ
ಪಮಂ ತಾಂಗಡೆಂ ಸಕಲಲೋಕಮಂ । ಪಾಳಿಪಂಗಡಮನಗೆ ವಲ್ಲಭಂ
ಗಡನುಡಿಯು ತಕ್ಕುಮೋ ಮತ್ಸಭೆಯೊಳು ॥ ನಾಳಿಗೆಯ ನರಿಯು ಬೇಡ
ವೆ ಕೊಬ್ಬಿ ದಿವನಂಯ । ಮಾಲಯಕೆ ಕಳುಪಿದಪೆ ನೀಕ್ಷಣಮನುತವಿ
ಲಯ । ಕಾಲದಂಥಕವೈರಿಯಂತಜಂ ಮುಳಿದೇಳೆ ವನಜಾಕ್ಷನಿಂತೆಂ
ದನು ॥೬॥ ಎಲವೊ ವಿಕ್ರಯಶೇಷವೋಷನೆಂದೆನ್ನನೀಂ । ಪಳಿದೆಲಾ
ಕಾಣಬಹುದಿನ್ನೇಕೆ ನೋಡೆನು । ತ್ತಳವಿಯೋಳ್ನಿನ್ನ ನಸೋಲಗೆ
ಲವುಗಳನೆನುತಬ್ಜಾಕ್ಷನಾಕ್ಷಣದೊಳು ॥ ಮುಳಿದು ಸ್ಮರಿಸಿದನಾನ
ಕುದುರೆತೇರ್ಕಾಲಾಳ । ಸುಳಿಹರಿಯೆ ಫಣಪನೆದೆಯೊಡೆಯೆ ಕುಲ

ಗಿರಿಬಿಱಿಯೆ । ತಲೆಕುಸಿಯೆ ದಿಗ್ಗಜಂಗಳ್ ಸೇನಾರಜಂ ತುಡುಕೆ ದಿಙ್ಮಂ
ಡಲವನು ॥೭॥ ಆವಾವದಿಕ್ಕುದಿಕ್ಕುಗಳೊಳಂ ಹರಿಯುದಂ। ತಾವಳಂ
ಹರಿಯ ಸರಿಸಂಕುಲಂ ಸರಿಯ ಸುಭ। ಟಾವಳಿಯ ಹರಿವ ರಥಂಗಳೆಲ್ಲ
ದೆಪೆರತಸಾಂ ಕಾಣೆನಾಹವದೊಳು॥ ಈವಿವಿಧಸೇನಾನಿಕಾಯವಂ
ಕಂಡುಕೋ । ಪಾವಲಂಬಿತಚಿತ್ತನಾಗಿ ಕಮಲಾಸನಂ । ತೀವಿದಱ
ತನ್ನಯಸಭಾಸದರನೆಲ್ಲರಂ ಮುರಿದೀಕ್ಷಿಪವಸರದೊಳು॥೮॥ ಕಲಕಿ
ದುದು ತುಂಬಿದಾಸ್ಥಾನಮಂಡಲವಾರ। ತುಳುಕಿದುದು ವೀರರಸಮ
ಮರಾಸ್ಯಮಂಡಲದೊ। ಳಳಿದುದು ಮನದ ಶಾಂತಿ ಪೆಚ್ಚಿದುದು ವಿಭ್ರಾಂ
ತಿ ಸಂಗರಾವೇಶದಿಂದ ॥ ಮೊಳಗಿದುದು ವಾದ್ಯಸಂದೋಹಮಾಪದ
ದೊಳು। ಜ್ವಲಿಸಿದವು ಸುಭಟರಕರಂಗಳೊಳು ಕೈದುಗ। ಳ್ಕೊಳುಗುಳೆ
ದವೃತ್ತಾಂತವೆಂತುಟಹುದೆನುತೆ ಲೋಕದಜನಂ ಚಿಂತಿಸಿದುದು॥೯॥
ಮನುಗಳ್ಬೆಬ್ಬೇರಿದರ್ಮುನಿಗಳುರೆವಿಹಾರಿದ। ರ್ದನುಜರಾರ್ಭಟಿಸಿ
ದರ್ಜಯಕೆ ಲಟಕಟಿಸಿದ । ರ್ದಿನಪಾಲರೊತ್ತಿದರ್ದಿವಿಜಭಟರೆತ್ತಿ
ದರ್ಕಿನ್ನರರ್ಸ್ವೇನೆಸಹಿತ॥ ಕನಲಿದಂ ಸುತ್ರಾಮನುರುಬಿದನು ಧೃವ
ಸೋಮ। ನಿನಸುತಂ ಪೆಚ್ಚಿದನ್ನಿರುತಿ ಭಾಳುರ್ಚಿದಂ। ವನಧಿಪಂ ಕೆರಳಿ
ದಂ ಹರಿ ರಣಕೆ ತೆರಳಿದಂ ಧನದಮ್ಮುನಿದು ನಡೆದನು॥೧೦॥ ಅನಿತರೋ
ಳ್ಕಲಸಕರ್ತೃಗಳೀರ್ದ್ವರಾಜ್ಞೆಯಿಂ। ತನತನಗೆ ಚೂಣಿಯ ಭಟಾಳಿಮಂ
ಗೊಂಡು ಸ್ರೊಕ್ಕನು ವರದೋಳ್ಬಾಡಿದರಾನ್ನುಡಿದಪ್ರತಿಜ್ಞಾವಚನಮಂ
ಖತಿಯೊಳು॥ ಇನಮಂಡಲಕೆ ಸಮುದ್ರಂಗಳೆ ನದಿಗಳೆ। ಘನಪದದ ಗತ್ತೊ
ತ್ತಿ ತರಹಂ ರಾಹುವಡಬಾಗ್ನಿ। ಘನನಿದಾಘಮುದಾಯ್ತು ಶಿವಶಿವಾ ಪೊ
ಗಳಲೇಂ ಸಂಗರದ ಸಂಭ್ರಮವನು॥೧೧॥ ಸೃಷ್ಟಿರಕ್ಷಾಕರ್ತೃಗಳೆ ಕಾಳಗ
ವಾಗೆ। ನಷ್ಟವೋ ಸುಖವೋ ಜಗತ್ತ್ರಯಕೆ ಶಿವಶಿವಾ । ಕಷ್ಟರಿವರೀವಿಧಿ
ಮುಕುಂದರಿನ್ನಾಗ್ಗರುಪೆ ಬೆಳ್ಪುದೀಸಂಕಟವನು॥ ಅಷ್ಟಮೂರ್ತಿಯೆ
ಕರ್ತೃ ಸಕಲಜಗಮಂ ಪೊರೆವ। ಭೀಷ್ಟಮಿನ್ನಾಗ್ಗೀ ವಿರಿಂಚಿಕಮಲಾಂಬ
ಕರ। ದುಷ್ಟಸಂಗ್ರಾಮಮಂ ಬಿಡಿಸನೇಕಕಟೆನುತ ಮೊರೆಯಿಟ್ಟದಖಿ
ಳಜನರು ॥೧೨॥ ಪಟಹ ತಂಬಟ ಡಕ್ಕ ಡೌಡೆ ಕಹಳಾಸಮು। ತ್ಕಟ
ನಾದಮುಳ್ಳಿರಿಯೆ ಪೇಳ್ವುದೇಂ ಬ್ರಹ್ಮಾಂಡ। ಘಟವೊಡೆದು ಬಹಿರಾವರ
ಣದಿಂದೆ ಜೀಳ್ವಂಬುಧಾರಾಪ್ರವಾಹವೆನಲು॥ ಪಟುಧನುರ್ಧರಕರ
ವಿಮುಕ್ತಬಾಣೌಘದಿ । ಕ್ತಟಕಭಿತ್ತಿಯು ನಾಗಿಸಲ್ಕ್ರಸಗಿಸಮರಲಂ।
ಪಟಪೆಚ್ಚುದಂಚಿದರ್ಕಾಕಜಂಬುಕತತಿಗೆ ರಿಪುಭಟರಮಾಂಸಂಗಳ್॥
ಜೋದರಾನೆಗಳ ಸಂಕುಶವಿಕ್ಕಿ ನೂಂಕಿದ। ರ್ನಾಬಸುತಕೈವಾಡಿದ

ಸಯಾರೋಹಕ । ರ್ಸೇಗಿಸಿಂಜಿನಿಯು ತಲೆವಿಲ್ಗೊಂಡುಪ್ಪೋಕ್ಕರ್ಧ
ನ್ನರವುರ್ದಲಿಸುತ॥ ಪಾದಘಟ್ಟಣೆಗೆ ನೆಲೆನೊಡೆಯೆ ಪಗಗಳ್ಸಿ
ಸು। ಲಾದಿಕೂರ್ಮಂಕೆಡೆಯೆ ಕಣೆಕಣೆಗಳಿಂ ಕಡಿಯೆ। ಕಾದಿದಕ್ರೈ
ಯೆ ಖಂಡೆಯದಜಿಣ್ಪನಿಂ ಪಟುಭಟರುಭಯಬಲದೊಳು॥೧೪॥ ಇ
ವಬ್ರಂಹರಾಟೋಪವೀದೆಸೆಯೊಳಿಂ। ತಿದೆದಿನ ಪರುಬ್ಬಾಟವಿದೆ
ನುಗಳಾವೇಶ । ವಿದೆದನುಜರುಣ್ಕ್ರಬೇರಿದೆ ಸುರರಸಂರಂಭವಿದೆಭು
ರ್ಬ್ಬಿಯೆನುತ॥ ಕದನಕೌಶಲರಸ್ತ್ರಶಸ್ತ್ರಪ್ರವೀಣರು। ಚ್ಛಿದಬಾ
ದಿದಂಬಿನಮುಸಕದಿಂದ ಕಿಡಿ। ಗೆದರು ತಂಪ್ಪೊಯಸ್ವಾಡಿದರ್ಕೂಡಿ
ರಿಭಟರುಂ ಲಯಾಲಯದೊಳು॥೧೫॥ ಇತ್ತಲ್ ತ್ತಂಡಚೂಣಿಯ
ಾನೀಕವೀರ। ದೊತ್ತರಿಸಿಕಡಿದಿರಿದು ಕೆಡೆಯ ಚಿತ್ತ ಕಾದುತಿರ। ವಿ
ಕಮಲಾಸನಂಗಂಸೆಯುಂ ಕಮಲಾಂಬಕಂ ಬೇಗಬಂಗರುಡನಂ॥ ಮ
ಿಪಸಕಲಸಂರಂಭದಿಂದೇರಿ ನಡಿ। ಸುತ್ತಿರಲ್ಕಾಣುತಂ ಸನ್ನಾಹದಿಂ
ಿ। ಪ್ರೌತ್ತಿಲಿಸದೊರೆದೋರೆಗಳನ್ನೋಡಿ ಹರಿಗೆ ಪಂಕಜಗರ್ಭನಿಂ
ದನು॥೧೬॥ ಈವುರುತ್ಸೈನ್ಯವಾಮಾನುವುಂ ನಿಗಳೀದನುಜ। ರೀ
ಪಾಚತುರಚತುರಂಗಸ್ನವಪ್ರಂಸ। ರೀಮಿತ್ರರೀಗರುಡಗಂಧರ್ವರೀ
ಕ್ಷಕಿನ್ನರಕಿಂಪುರುಷರು॥ ಭೂಮಿಯೊಳದಾಗುಂಟು ತೋರೆ
ಸಂಪದಕೆ। ತಾಮರಸನಯನನೀಂ ಪಾಸಟಿಯೆ ಪೇಳೆನ। ಲಾಕ್ಷ ವಪಿ
ಲೆವುಘಕಮಲಸಂಭವ ತೋರ್ಪ್ಪ ಸೆನ್ನಿರವನೋಡೆಂದನು॥೧೭॥
ತೆದನಂಬುಜಲೋಚನಂ ವಿಶ್ವರೂಪಿನಿಂ। ಬಿಡುಗಣ್ಣರವ್ಮ ಸುವು
ಂದ್ರರಂದನುಜರಂ । ಕಡೆಯಮಾತೇನಖಿಳ ಚತುರಂಗವುಂ ಬೊಂ
ದಂರವಿಗಳಂಗರುಡರಂ॥ ಬಿಡದೆ ಗಂಧರ್ವರಂ ಯಕ್ಷಕಿನ್ನರರನುಗ್ಗ
ರಕಿಂಪುರುಷರಂ ಸೃಜಿಸಿಯುನಿತಲ್ಲದಾ। ಗಡೆವಿಷ್ಣಗಳ ನಸಂಖ್ಯಾ
ಂ ತೋರಿದಂ ಪ್ರೋಗಳಲೇನಚ್ಚರಿಯನು ॥೧೮॥ ಇಂದಾಡಿತುಭಯ
ನಾವಿತತ್ರಿಕರಿಕರಿಯೊ। ಳುರುವಶ್ವವುಶ್ವಂಗಳೊಳು ಭಟಭಟರೊ
ರೆ। ಮಿರುಗುವರಘಾರೋಹಕರ್ಸ್ಸರೂಘಾರೂಢರೊಡನೆ ಸುರರವು
ೊಡನೆ॥ ಸರಿಗರಕ್ಕಸರಸುರರೊಡನನುಕ್ರಮದೊಳಿಂ । ತರಿಸಿನಾ
ಸ್ತ್ರಶಸ್ತ್ರಂಗಳಿಂ ಕಾದಿದರ । ಕೆರ್ರುಪಿಟ್ಟು ಪ್ರೊಗಳೊಕವಿಯಾರಂಬು
ಕ್ಷಕಮಲಾಸನರಪಟುಭಟರನು ॥೧೯॥ ಪರಿವರಕ್ತಕೆಸಿಡಿನತ
ಳ್ಗೆ ಪಾರ್ವರಿಂಬಿ । ಗುರುಳಿಟ್ಟು ಗಾರ್ಭಟ ಪರವಕಬ್ಧಿಯಾಗಸಂ ।
ದಂತಮುವನಿಮಂಡಲವುಂ ಬುಜಭವಾಂಡಸಮಿತಿಯಿಂ ಬಿಲ್ಲನಾ
ಸ್ತ್ರ ॥ ಗುರುತರವಡಬಶಿಖಿಗೆರುಕ್ಷಂಗಳಿಗೆ ದಿಶಾ। ಪರಿವೃತರಪತ್ತ

ನಂಗಳಿಗೆಶೇಷನತಲೆಗು । ಪರಿಲೋಕತತ್ತಿಗೆದೃಶ್ಯತೆವಿಗತಕಾಂತಿಗ
ಳ್ತಲೆಭರಂಬಧಿರಮಾಯ್ತು ॥೨೦॥ ಮುಂಡಗಳರುಂಡಗಳತಂಡಗಳ
ನುರೆಕರುಳ । ಜೊಂಡುಗಳತುಂಡುಗಳಹಿಂಡುಗಳಮುಂಕೆದರೊ।
ಖಂಡಗಳಪಿಂಡಗಳಗುಂಡುಗಳ ನುಂಡುಂಡುಕೊಂಡಾಡಿಘಟುಭಟರ
ನು ॥ ಗಂಡೇಳ್ವಭೂತಮುತ್ಪ್ರೇತಜಾತಂಗಳಿಂ । ದಿಂಡುಳ್ವರ್ಪೊ
ರಳೊನರಳುವಪರಾಕ್ರಮಿಗಳಿಂ । ಕಂಡೆಡೆಗೆಪಾಯ್ವರಿಂಕಾಯ್ವರಿಂ
ಸುಯ್ವರಿಂ ತದ್ರಣಾಂಗಣಮೆಸದುದು ॥೨೧॥ ಪುಂಡರೀಕೋತ್ಪಾ
ತಮಾಗಿಯುಂಭಾವಿಸ । ಲ್ಕುಂಡಾಲದಳಿತಸದಮಲ್ತು ಮುಕ್ತಂಜಾ
ತ । ಮುಂಡಸಂತಾನಾಗಿಯುಂದಿವಾಕರನಲ್ತು ಸಟೆವಿರಕ್ತಾಂಕಮಾ
ಗಿ ॥ ತಂಡದತಪೋವನಮುದಲ್ತು ರೆಶಿವಾನ್ವಿತಂ । ಖಂಡಪರಶುಪ್ರ
ಯುತಮಾಗಿಕೈಲಾಸದು । ದ್ದಂಡಗಿರಿಯಲ್ತು ನಿಸಿನೋಟಕರಕಣ್ಣಾ
ರಣಾಂಕಣಂಚೆಲ್ವಾದುದು ॥೨೨॥ ಈಪರಿಯೊಳುಭಯಸೇನಾಭಟ
ಪ್ರೌರ್ಯಾಡ್ಡಿರೂಪಳಿದುಮಡಿವುದಂಕಂಡು ಹರಿಕಮಲಜ। ಕೋ
ಪಮಾನಸರಾಗಿನಿಜವಾಹನಂಗಳಂಪದಸಂಜ್ಞೆಯಿಂನೊಂಕಲು॥ ಆಪ
ಕ್ಷಿಪಕ್ಷಾನಿಲಂಪೊಯ್ಯಲಾಕ್ಷಣಂ। ಭೂಪಯೋಧಿಗಳೊಂದುಗೂಡಿದ
ವ್ವನಿಮಿಷದೋ । ಳ್ಪ್ರಾಪಮಂಜೇಗೈದುರುಭಯವೀರಭರ್ಯಯಂಕರ
ಮುಣ್ಮತ್ತಿರೆಜಗದೊಳು ॥೨೩॥ ಸಟೆಯುಮಾತೇನಖಿಳಲೋಕಮಂ
ಸಂಹರಿಪ। ನಿಟಲಾಂಬಕನಮಹಾಧ್ವಾನವ್ರೌವಿಷಣ್ಣಪದ। ನಟದರ್ಘ
ತಪಲಯಕಾಲಮೇಘಾಡಂಬರವ್ರೌಶಿವಶಿವಾಪೊಸತೆನೆ॥ ಪಟುತರ
ದಸಮರಲಂಪಟಭಟರುರಸ್ಥಳಂ । ಸ್ಫುಟಮಾಗೆಸಕಲದಿಕ್ತಟಕವಾ
ಟಂತೆರೆಯೆ । ಚಟುಳಸಂಗ್ರಾಮಭೀಮರವಿಜಯಕಾಮರುಚಾಪಟ
ರವಮುಳ್ಳಿರಿದುದು॥೨೪॥ ಸೇದಿತಾಂಸವಡಿಮೆರಳಿನೊಳಂಬಕಣಾರ್ಂ
ತ । ಕೈದಸಿನುಡಿದನೆಲನ್ರೌಚೊಮ್ಮಚೊಮ್ಮೀತಿಗಾಂ । ಕಾದೊಡೆ
ರಿಯದೆಪೋದೆನಲಾನೋಡುನೋಡಾದೊಡನ್ನನಾರಾಚವೆನುತ॥
ವೇದಚೋರಧ್ವಂಸಿ ಯೆಸಬಾಕಳಂಬಮಂ । ಛೇದಿಸಿಮುಗುಳೆಬ
ವ್ಯಚಾಣಂಗಳಿಂದೆಚ್ಚು । ಭೇದಿಸಲುರಮನದರಘಾತಿಗೆಮುರಾಂತ
ಕಂನೊಂದುಖತಿಯಂತಾಳ್ದನು॥೨೫॥ ಪೇಳಬಹುದೇಂಗರಿಯರೋ
ಷಮೆಬ್ಬುಯಬಕುಕ । ರಾಳತೆಯನುಯ್ವಯ್ವಪತರುಪದ್ರಂಗಳಂ।
ತೇಲಿಸುವವತಾರ್ವಲೋಕಕಂಟಕರಾದರಿಧಪರಿಹರಿಸದಿರ್ಪುದು॥
ಬಾಲೇಂದುಮೌಳಿಗೇಂಸ್ವೈರಣೆಯೊತನ್ನಕಾರಾಂ । ತಾಲಿಂಗನಕ್ಕೆದೇ
ಸಮಯವೇಭಕ್ತಜನ । ಪಾಲನೆಂಬೀಬಿರಿದನುಳಿದನೇಹನೆನುತ

ಭುವನಜನವುಳಿವಳಿದುದು ||೨೬|| ಅನಿತರೊಳು ಶಂಭುಜಲದನಿಭ
ಗಭೀರೋಕ್ತಿಯಿಂ| ವನಜಾಕ್ಷನೆಂದನೆಲೆ ಖೂಳಕಮಲಜನೀನೆ| ಘ
ನವೆನುತ್ತೆನ್ನೊಡನೆ ಸೆಣಸಿದೀಫಲವನುಣ್ಣೆನುತೆಚ್ಚು ಬೊಬ್ಬಿಡಲ್ಕೆ ||
ಕನಲಿ ಬಪಾರ್ಬಾಣಗಳ ಕಡಿದು ಜಡಿದು ಭೋಂ | ಕನೆ ಬೆನ್ನಬತ್ತ
ಳಿಕೆಯಿಂದೆ ಬೊಮ್ಮಾಸ್ತ್ರಮಂ| ವನಜಭವನುಗಿದು ತಿರುವಿಗೆ ಹೂಡಿ
ಕಿವಿವರೆಗೆ ತೆಗೆದು ಬೊಬ್ಬಿರಿದೆಚ್ಚನು ||೨೭|| ಎಲೆಲೆ ಬೆಂದುದು ಲೋ
ಕವೀಕ್ಷಣಂ ಜಗಕಿದೇಂ| ವಿಲಯವೋ ನಿಲಿಸು ನಿಲಿಸೈ ಮೂರ್ಖ ಕಮ
ಲಜನ| ಕೊಲೆಗೆಡುಕ ಶರವನೆಂದಲ್ಲಲ್ಲಿಗುಜುಗುಜಿಸೆ ಮುಂಬರಿವ ಬೊ
ಮ್ಮಾಸ್ತ್ರಮಂ || ಜಲಜನಾಭಂ ಕಂಡು ತನ್ನ ಬತ್ತಳಿಕೆಯಿಂ | ಸೆಳೆದನು
ನ್ನತವೈಷ್ಣವಾಸ್ತ್ರಮಂ ಪೇರ್ಗಿಡಿಯ| ಬಳಗಂಗಳವಗಡಿಸೆ ಭಟರಭಯ
ವಿಮ್ಮಡಿಸೆ ಪೂಡಿದಂ ಕಾರ್ಮುಕದೊಳು ||೨೮|| ಪೂಡೆಬೇಡ ಕಟನಿ
ಟ್ಟಿಂಬಂತೆ ಗಿರಿಗಳೆ | ಲ್ಲಾಡುತಿರ್ದುವು ಬಾಣವಹ್ನಿ ಪೀರ್ದಪುದೆಂದು|
ನೋಡಿ ಪೊರೆಯುಡುವಂತೆ ಶರಧಿತಳಮುಳಿಲೇಳಲುದ್ಘೋಷಮುಯ
ಪಾದುದು|| ಪೊಡೆಪಣ್ತಾಮುಳಿಕಫಲಮುದಿರ್ವಂದದಿಂ| ನಾಡೆಸುರಿದು
ದುರುಕ್ಷರಾಜಿಲೋಕಂಗಳಿಗೆಕೇ| ಡಡಸಿತೆಂದು ಬಾಯ್ಬಿಡುವಂತೆ ಧ
ರಣೀತಳಂ ಬಿರಿದುದೇನೆಂಬೆನು ||೨೯|| ನಾರಿಯಿಂದುಗಿದು ಬಿಡಲಾ
ಕ್ಷಣಂ ಲಯಮುದಮುದ | ನ್ಮಾರಿಯುರಿಗಣ್ಣಂತೆ ಬರ್ಪುದಂ ಪೇಳ್ವೆನೆ| ನಾ
ರಿನ್ನುಮುದದ ಮಾರ್ಗ್ಗಿಡಿಗಳುಂ ಸಕಲಲೋಕಾಳಿ ಸಂವರ್ತಮಾಯ್ತು||
ವಾರಿಜಭನಾಸ್ತ್ರಮಾ ಪ್ರತ್ಯಸ್ತ್ರಮಂ ಕಂಡು| ವಾರಿಧಿಯು ಕಿಚ್ಚಿನಂತಡ
ರಿಲಿಟ ಕಟಸಲ್ಕೆ | ವಾರಿರುಹನಾಭನಶರಂ ತುಡುಕಿದುದು ಕವಿವ ಪೇ
ರ್ಗಿಡಿಯು ಸಡಗರದೊಳು ||೩|| ಹೂಂಕರಿಸುತುರಿಯನುಗುಳುತಮ
ಲತುಮುಸ್ಸವಸಿ| ಶಂಕೆಯಂ ಪುಟ್ಟಸುತ ಹರಿಕಮಲಜಗಾರ್ಕರ| ಣಾಂಕಣ
ಮನುಡುಭ್ರಮಂಡಲದೊಳೊಂದನೊಂದಡರಿ ಚುಂಬಿಸುವಾಗಳು||
ಪಂಕಜಭವಾಂಡ ಮುರಿದುದು ಮಹಾಪ್ರಲಯದಾ| ತಂಕಮಾದುದು
ಹರಿವಿರಿಂಚಿಗಳ್ಗಿವರೀರ್ವ| ರುಂಕೂಡಿ ವರಖಗದ್ವಯಮಲ್ಲ ವಾಹವಂ
ಶೂನ್ಯಮಾಯ್ತೇವೇಳ್ವೆನು ||೩೧|| ಹರಿಗರುತ್ಮನನಿಳಿದು ಕರಕಾರ್ಮು
ಕವನುಳಿದು || ಗುರುತರಂಗದಾದಂಡಮಂ ಕೊಂಡು ನಿಲೆಕಂಡು| ಸರ
ಸಿಜಭವಂ ವಾಹನವನುಳಿದು ತಾಂಗದಾದಂಡಮಂ ಕಳೆದುಕೊಂಡು ||
ಪರಿಪರಿದು ಪಾಡರಿದು ತಳವೇಗ್ಗಳೊಳಗಪ್ಪೊ| ಯ್ದು ರವಣಿಸಿ ಪೆರೆಸಾಳ
ರಮುಂಬರಿದು ಗದೆಗಳಿಂ | ತಿರುಪಭುಜಸತ್ವದಿಂ ತಾರಿದರುಘನಗ
ದಾಯುದ್ಧಮಂ ಸಂಗರದೊಳು ||೩೨|| ಪೊಯ್ವನೀಬ್ಬರುಮಂಬಿಪಂಬೊ

ಮ್ಮನದು ಪ್ರಸಿದ್ಧಿ| ಕಾಯ್ದನೀಹರಿಕೂಡೆಕ್ಕೈವಾಳ್ಪನೀಬೊಮ್ಮ|
ಸ್ವವಡಿಪರಾಕ್ರಮದೊಳೆರಗುವಂಹರಿಮತ್ತೆ ಮೈಗೊಡಂ ಕಮಲಭ
ವನು || ಪಾಯ್ದನೀಹರಿಯುಂದುನಿಲರ್ಕ್ಷ್ಯಸಾಗಿತಲೆ| ಗಾಯ್ದನೇ
ನಿಸ್ನನೆನುತೆರಗುವಂಬಿಡಿಯೊಲದು | ಮೈವಳಿಗೆಸಂದುಸಾಧಿಸುವ
ಮ್ಮರಧ್ವಂಸಿಪ್ಪುಗಳಲ್ಲೀನೃಟ್ಟರಿಯನು||೨೨|| ಮಾರುವರ್ಬ್ಬೀರುವರ್ಗ್ರ್ಯಾ
ರ್ಧ್ಯಾಮುಂಬಣಕಕವಿ | ದೇರುವರ್ತ್ತೋರುವರ್ಪ್ಪಸಮುಂಪ್ಪೋಯ್ಡುಕೈ |
ದೋರುವರ್ಬ್ಬೋರುವರ್ಘರ್ಯಮುಂಘರಣಿಮಂಡಲದಿಂದ ಗಗನತಳ
ಕೆ || ಪಾರುವರ್ಕ್ಕೀರುವರ್ಕರ್ಲಕಡೆಗೆಹರಿಯುಂತೆ| ಬೀರುವಜಾರ್ರು
ವರ್ಮ್ಯರ್ಗೊಡದೆಬೀರಮುಂ | ದೂರುವರ್ಮ್ಮರುವರ್ಮ್ಯರ್ಗಳಂವಿಕ್ರ
ಮಗ್ರಮ್ಯಕೀವರ್ರ್ಪ್ಪಿಭಟರು||೨೩|| ಇಂತೀರ್ವ್ವರುಂಸೋಲಗೆಲವ್ರಗಿ
ಣದೆಗದಗ | ಳಂತೂರೆದುಮಲ್ಲಗಾಳಗಕೆಳಸುತಿರಲಾಗ | ಕಂತುಪಿ
ತನೇರಿದಗರುತ್ಮಂಗೆಕಮಲಭವನಹಂಸೆಗಾದುದುಕಾಳಗಂ|| ಅಂತವೆ
ರಡುಂಕಾದಿಹತನಾಗಿಹೋದಸಮ| ನಂತರದೊಳುಭಯವೀರರ್ಬ್ಬ
ಹುಯುಗವನ| ತ್ರಾಂತರೋಷದೊಳಾಗ್ಭಟಿಸಿಪ್ಪೊಯ್ಯಲಾಧ್ವನಿಮ
ಹಾಭಯಂಕರವಾದುದು ||೨೪|| ಲಕ್ಷ್ಕಕಪೂರ್ರತಾಂಬೂಲಮುಂ
ತಮ್ಮಿಲಿಜೊ | ಳೆಳವಡಿಸಿಪ್ರಬಡಬೆಮರುಗಳನ್ನುತಕ್ಷಣಂ | ಕಳೆ
ನಘೂಳಿಯೊಳೆತಂಪಿಸಿಮುಷ್ಟಿಯಂಬಟ್ಟಿದೆವೆಗಳಲುಗಬಿಕ್ಷಿಸುತ್ತ||ನ
ಳಿನಭವನಳಿನಾಕ್ಷವೀರ್ವ್ವರುಂಕ್ಕೆಗಳಂ | ಸಲೆತೋರಿತೋರುತಕು
ಲಾಲಚಕ್ರದಭವಣ| ಯೊಲುಪ್ಪಂದುಯಾಮವಾತ್ರಂತಿರುಗಿದಟ್ಟ
ಶಾಮಂಡಲಂತಿರುಗುತಿರಲು ||೨೫|| ನೋಡಿಟ್ಟಿಸುವಸಿಮುಷ್ಟಗ್
ಘಣರಾಜಂಗೆ | ಕೇಡುಸಂಭವಿಸಿತೀಭಟಸಂಗ್ರಾಮಮುಂ | ಸಾ
ಡಿಸಿಟ್ಟಸಿಪ್ಪೊಗಳಲ್ಲಾರೋ ಮದುದೇವ ಬಾಕಿದೇಕಡೆಯೆನಲ್ಕ ||
ನೀಡಿರ್ವಾಮಹಸ್ತವನೆವರಿದುರುತರದ | ಗೂಢಮುಷ್ಟಿಯುಟರಿ
ಪತನುಲರೆಯುಕ್ಕಗಳೊಲೆ || ದಾಡುತಿದರ್ಘ್ಘರಾಕಂಪಬೊಳ್ಳಾಂ
ಪಿಸುವಕುಲಗಿರಿಯುಪಾಂಗನಿಂದಂ ||೨೬|| ಘನಗುರುತ್ಮಾಕೆದೋಹ
ಣಾಪ್ರನೀಲಾದ್ರಿಗಳ್ಕನತಿ ಕಾದಲ್ಕಬಂಡಪ್ಪೊಪೋಳೆನಲ್ಕಾಗ| ವನಜ
ಭವವನಜಸಾಭರ್ತ್ತೋರದಪೂರ್ರ್ಯುತನತನಗೆಶೌರ್ಯವುಂ|| ಮ
ನುಗಮುಷ್ಟಿಯೊಳೆಪೇಗರ್ಡಿತಿವಿವತ್ರವಿಗಳ್ | ದನಿದೋಂಭಟರಕಾ
ಯಂಗೆಲವ್ರಗಾಣದ| ತ್ಯಾಸುಪಮುಪರಾಕ್ರಮಗಳ್ಭಟಿಸಿಪ್ಪೊಯ್ಯಾ
ಡಿದರುಮಹಾಸಂಗರದೊಳಂ ||೨೭|| ಕರವಳೆಯುಕೋರ್ರೋರ್ಮ್ಮತಳ
ಪತ್ರಕೋರ್ಧೋರ್ಮ್ಮ | ಸರಿಸಮುಂಕಡಕೋರ್ಮ್ಮಬಂಡಪಟ್ಟಸಕೋರ್ಮ್ಮ|

ಉರಗಬಂಧನಕೋರ್ಕ್ಕೆ ಬಾಹುದಣುವಿಂ ಗೋರ್ಕ್ಕೆದೊಕ್ಕರಕ್ಕೋರ್ಕ್ರೆ
ಯೋರ್ವನ್॥ ಶಿರವಳೆಯಕೋರೋರ್ಕ್ರೆ ಕಂದದೊಕ್ಕರಕ್ಕೋರ್ವನ್। ಹ
ರಿಕಮಲಭವರೊದಗಿದರ್ವತ್ತೆಯುಂಗೆಲವು । ದೊರಕೊಳ್ಳದಿರೆಮ
ಹಾರೋಷನಾನಸನಾಗಿಮಾಧವಂಚಿಂತಿಸಿದನು॥ ೩೯॥ ಎನ್ನೊಡನೆ
ಸರಿಬರಿಗೆಬರಲೇಸರವೆನಿವನ। ಗನ್ನಮಂನಿಲಿಸುವೆಂತಾನೆನುತಮಾ
ಧವಂ। ನನ್ನಿಯಂಕಮಲಜನ್ಘಾತಿಗೊಡಲಂಗೊಟ್ಟುಗೆಲವುದೋರಿ
ಸಿಖುತಿಯೊಳು ॥ ಮುನ್ನೀರಮಗಳೆಗಂಡಂವಿಧಿಯಮಸ್ತಕವ। ನುಂ
ನತಗದಮುಷ್ಟಿಯಿಂತಿವಿಯಲ್ಕೆ ತಟ್ಟಿರಂ। ಭಿನ್ನಮಾದುದುನಾಲ್ಕುಸೀ
ಳ್ಪಕ್ಕೆಸಮನಾಗೆಪೇಳ್ವುದೇನದ್ಭುತವನು ॥೪೦॥ ಶಿರವೊಡೆದೊಡೇ
ನಾಯ್ತುಸರಸಿರುಹಸಂಭವಂ । ಧುರದರಿದ್ರನೆಬಿರಿದಮಸ್ತಕದಪೋ
ಳ್ಗಳಂ ವರಚತುರ್ವರ್ಗದನಂಗಳೆಮಾತ್ರಡಿಕೊಂಡುಪುನರಪಿಕೃದ್ಧಚಿತ್ತ
ನಾಗಿ॥ ಗಂಗೆಮಾರಾಂತುಬಾಹುಗ್ವಯುವನಪ್ಪಳಿಸಿ । ಮುರಿದೆರಗು
ವೆಂಮುರಾಂತಕನೆಂಬವಸರದೊಳಿರದಾಗುದಾಗಸದೊಳೊಂದುಲು
ಪ್ರಸಿದ್ಧರಾಮೇಶಕೇಳ್ಚತ್ತುಕವನು॥೪೧॥ ಅರಿಯದವನೇನೀಂಮು
ರಾರಿಮೂರ್ಖನೆಬೊಮ್ಮ । ತರಿಸಂದುನಿನಗಮಾತ್ಸಗವೊಂದೇವ
ಸ್ತು। ಪೆರತುಂಟುತದ್ವಸ್ತುವಿಸ್ಲಿಜನಿಸುವ್ರದೀಗಳೆದರಪದಮಸ್ತಕವ
ನು। ನೆರೆನೋಡಿಗಿಕಂಡಾತನೇಸಹಪಿಯೆನೆಕೇಳ್ದು । ಬೆರಗಾಗಿತಾವೀ
ಗ್ವರುಂರಣಾವೇಶವಂ । ಮರೆದುನೋಳ್ಪನಿತರೊಳುಸಿದ್ಧರಾಮೇ
ಶಕೇಳಿನ್ನೊಂದುಕೌತುಕವನು ॥೪೨॥ ತರಣಬಿಂಬಂಗಳೆಂಕರಗಿಕೆ
ರುವಿಸ್ತಿಗಗ। ಪಿರಿಯಮೂಲಸ್ತಂಭಸ್ತೋಪಂಚಭೂತಮಂ । ಪರಿಗಣಿ
ಸಲಳವಿಮಿಸುನಿಯದಂಡಸ್ತ್ರೀಮುಂದೆಸೃಜಿಯಿಸುವಲೋಕಂಗಳು॥
ಜನಿಗಪವವಕ್ಕಡವರ್ಗಗಿರಲ್ವೇಳ್ಗಂದು। ಗುರುತರಸುವರ್ಣದಸ
ಲಾಕೆಯುಂಬಲಿಗರೋ। ಸರಪರಾಪೇಳೆಲಾಸರಿಯಜರಮಧ್ಯದೆಮ
ಹಾಲಿಂಗಮುದಯಿಸಿದುದು ॥೪೩॥ ಆಲಿಂಗದತುಳೆತರಪೀಠಂಧರಿತ್ರಿ
ಶೈ। ಲಾಳಿಭುಜನೆಸವಸಪ್ತಾಂಬುಧಿಗಳೆಕುಕ್ಷಿ। ಲೋಲಾಕ್ಷಿಗಳುಚಂ
ದ್ರಸೂರ್ಯಾಗ್ನಿಗಳುರಸಾತಳೆದಕಡೆಯೇಪಾದವು॥ ಮೇಲಿಪ್ಪತಾ
ರಾಳಿಗಳೆಪುಷ್ಪಸಂದೋಹ । ಮೋಲಗಿಪಪರಿವಾರವೇಪ್ರಮಥಗಣ
ವಾಗೆ। ಲೀಲೆಯಿಂಮೂಡಿದುರುಲಿಂಗಮಜಹರಿಗಳೆಂಬೆರಗುವಡಿಸಿದು
ದಾಗಳು ॥೪೪॥ ಲಲಿತತೇಜೋಮಯದಲಿಂಗದಿದಿರೊಳುಮಿಂಚು।
ಬುಳುವೆಂತುಟಂತಾದುದಿವರತೇಜಂಕೊಡೆ। ತ್ರಿಳಿದುನಿಪ್ರೈಸಿದರಾಪ್ಪ
ದಮುಂಹರಿಮಸ್ತಕಮನಜಂಕಾಣ್ಬೆನೆಂದು॥ ನಳಿನನಾಭಂವರಾಹಾ

ಕೃತ್ರಿಯನಾಕ್ಷಣಂ । ತಳೆದಿಳಿದು ಪೋದಂಧರಾತಳವನುನೋಡೆಬಗಿ
ದು । ಕಲಹಂಸೆಯಾಗಿಬೊಮ್ಮಂ ಪೋಗುತಿರೆ ಬಳಕೇತಕಿಯೊ
ಳಿಂತೆಂದನು ॥೪೫॥ ಎಲೆಮಹಾತ್ಮನೆನಮಸ್ಕಾರಮೆಲ್ಲಿಂದಾಯ್ತು।
ಸುಳಿವುನಿಮಗೆಂದೆನಲು ಪರಶಿವನಮಕುಟದಿಂ। ದಿಳಿತಂದೆನೀಗಕೇ
ತಕಿಯೆಂಬುದಭಿಧಾನಮೆನಗೆನೀನಾರೆನಲ್ಕೆ ॥ ಜಲಜಸಂಭವನಾಂ
ಸದಾಶಿವನಮಕುಟಮಂ । ತಿಳಿಯಲೈದುವೆನಿಲ್ಲಿಗೆನಿತು ಗಾವುದ
ಮುಂಟು । ತಿಳುಪೆನಲು ನಸುನಕ್ಕು ಪಲಯುಗದೊಳೈದೆಯುಂಕಾ
ಣ್ಬುದಘಟಿತವೆಂದನು ॥೪೬॥ ಚಿಟ್ಟಿಗಂಮನದೊಳಬುಜಾಸನಂಸ್ವಾ
ದಯಮಂ । ಚಿಟ್ಟಿದಂಕೇತಕಿಯೊಳೆಲೆಪುರುಷಹರಿಗೆಮೂ । ರಟ್ಟಿ
ಯುಳ್ಳನಮಸ್ತಕಂಗಂಡುಬಹೆನೆಂದು ಭಾಷೆಯಂಕೊಟ್ಟುಬಂದೆಂ ॥
ಮುಚ್ಚಿಮರೆಯಾಕೆಹರಿಯೊಡನೆಸಾಗೆಲ್ವಂತು। ಟುಕ್ಕರಿಸವೇಳ್ಕೆಂ
ಗುಬೇಡಕೊಳ್ಳಿಕೈಕೊಳು। ಪ್ರಚ್ಛರಿಯೊಳೈದಿಮುನ್ನಿನರಣಾಂಕಣ
ದೆಡೆಗೆತಾವಿರ್ವರುಂಬಂದರು ॥೪೭॥ ಹರನಪಾದಾಬ್ಜಮಂಕಾಣದೆ
ಮುರಾಂತಕಂ। ಮರಳಿಮುನ್ನಿನರಣಾಂಕಣಕೆಬರಲವರೆಪೊದ। ಲಿ
ರೆಶಿವನಮಕುಟಮಂಕಂಡೆಯಾನೀನೆನಲ್ಕಮಲಜಂಕಂಡೆನೆನಲು। ನಿ
ರುತಮೇಸಾಕ್ಷಿಯಾರೆನಲುಕೇತಕಿರಾಜ। ಸರಮಿಂಗನಾಭಬೊಮ್ಮಂ
ಕಂಡನೆನೆತಿಳಿದು। ಹರನಸಮಸ್ತಕಕೆಸಲ್ಲದೆಪೋಗುಗೋಪಿನೀನೆನು
ತಹರಿಶಾಪಿಸಿದನು ॥೪೮॥ ಶಾಪಮಂತಳೆದುಕೇತಕಿರಾಜನತುಳಸಂ।
ತಾಪದಿಂಪೋಗಲಾಲಿಂಗಮೋಭೀಕರದ । ರೂಪಮಂತೋರಲೆದೆಜ
ರ್ಝರಿತವಾಗಲಜಹರಿಗಳತ್ರಿಭೀತಿಯಿಂದಂ ॥ ಈಪರಿಯನಿನ್ನಭೀ
ಷಣಮೂರ್ತಿಯನ್ನೋಡ। ಲಾಪೆವೇನಾವೆಂದುಪೊಗಳೆದೇವಂಸುಭ
ಗ। ರೂಪಿನಿಂದಿರೆಕಂಡುಕೈಮುಗಿದುತಾಪಾರ್ವತೀಶನಂನುತಿಯಿಸಿ
ದರು ॥೪೯॥ ಜಯಜಯಗುಣಾಭರಣಜಯವಿಜನತಚರಣ। ಜಯ
ಜಯಮಹಾಲಿಂಗಜಯನತಾಂಬುಜಭೃಂಗ। ಜಯಜಯಸದಾಸೋ
ಮಜಯರಜತಗಿರಿಧಾಮಜಯಭೀಮವಿಧೃತಸೋಮ ॥ ಜಯಜ
ಯವಿಷಗ್ರೀವಜಯಭಕ್ತಸಂಜೀವ । ಜಯಜಯಕೃಪಾಪಾಂಗಜ
ಯಗಿರಿಸುತಾರ್ಧಾಂಗ । ಜಯಜಯಚಿದಾನಂದಜಯಮಹಾಗಣ
ಬೃಂದಜಯಯೆಂದಭಿನುತಿಸಿದಂ ॥೫೦॥ ರಾಜಶೇಖರದಿವಿಜರಾಜವಂ
ದಿತಪಾದ। ರಾಜೀವಮಿತ್ರರಾಜರಾಜಸಖಚಂದ್ರದಿನ। ರಾಜಕೋಟಿ
ಪ್ರಭಾರಾಜಿತಶರೀರಖಳರಾಜಮದವಿಧ್ವಂಸನ। ರಾಜೀವಭವಮ
ಕುಟರಾಜತ್ಸುರತ್ನನೀ। ರಾಜನಚರಣಭೋಗಿರಾಜಭೂಷಣಶೈಲ।

ರಾಜಾತ್ಮಜಾಸ್ತನವಿರಾಜಕುಂಕುಮವಕ್ಷ ಸಲಹೆಂದು ಹರಿಪೊಗಳ್ದ
ನು ‖೫೧‖ ಉಭಯಪಾರ್ಶ್ವದೊಳಿರ್ದು ಪೊಗಳೆ ಸೃಷ್ಟಿಸ್ಥಿತಿಯ| ವಿಭು
ಗಳೆನಿಪ ಸಂಕೃತ ಸ್ತೋತ್ರತತಿಗಾಗ | ಳಭವವತಿಕರುಣವಂತಾ
ಳಿ ನಿರ್ಮಳಸುಪ್ರಸನ್ನತೆಯೊಳೆವರವನಿಂದೆ| ವಿಭವದಿಂ ಪಂಚವದನ
ದಶಭುಜಂಗಳತಿ | ಶುಭವಾದಪಂಚದಶಲೋಚನದ ಕೆಂಜೆಡೆಯ|
ಸುಭಗರೂಪಂದೋರಲೀಶ್ವರಂ ಮುಗುಳೆ ಕೊಂಡಾಡಿದರ್ಭಕ್ತಿಯಿಂ
ದಂ ‖೫೨‖ ಮನದಣಿಯಲೀರ್ವರುಂ ಕೊಂಡಾಡೆ ಶಂಕರಂ| ದನುಜಾ
ರಿಯುಂ ಕರೆದು ನೀಂ ಸಕಲಲೋಕಂಗ| ಳನುಪಮದ ರಕ್ಷೆಯಂ ಮಾಡು
ತ್ತೆ ಕಮಲಜನ ಸೃಷ್ಟಿಯಂ ಕರಗಿಬಿರ್ದ್ದ ‖ ಘನತರವ ನಿಷ್ಪೃಧರೆಯಮು
ನ್ನಿನಂದದಿಂ | ದನುಗೊಳಿಸು ಪೋಗೆಂದು ಕಾರುಣ್ಯದಿಂ ಬೆಸಸಿ| ವ
ನಜಸಂಭವನಂ ಸಮಿಪಕ್ಕೆ ಕರೆದು ಪರಶಿವನಾಗಳಿಂತೆಂದನು ‖೫೩‖
ಸರಸಿಜೋದ್ಭವ ಕೇಳೆ ಸೃಷ್ಟಿಯಂ ಬಿಟ್ಟು ಸು | ಸ್ಥಿರಬುದ್ಧಿಯಿಂ ಮುನ್ನ
ನ್ನಿನಂದದಿಂ ಸೃಷ್ಟಿಯಂ| ವಿರಚಿಸುವುದೆಂದು ನಿರವಿಸಿ ನಿರಾಕಾರವಂ
ತಳೆಯಲಾ ಶಿವನಾಜ್ಞೆಯಿಂ ‖ ಗಿರಿವರಾಕೃತಿಯೊಳಿರದೆತ್ತ ಕೂಡೆ
ಸ್ಥಿರಿಸಿ ಧರೆಯಂ ವಿಧಿಗೆ ಸೃಷ್ಟಿಸಲ್ಪೋಕ್ತತಂ | ನಿರುತಮಮೃತಾ
ಬ್ಧಿಯುತ್ತರಭಾಗದೊಳ್ಯೋಗಪದವಡಿಪದನಾ ಕ್ಷಣದೊಳು ‖೫೪‖
ಇಂತೆಸವ ಚನ್ನಬಸವೇಶನ ಪುರಾಣಮಂ | ಸಂತಸದಿ ಬಗದವರ್ಗೊ
ಬದರ್ಗೆ ಮಾತ | ಗ್ರಂತಮಂ ಬಿಡದೆ ಕೇಳ್ದರ್ಗೆ ಪರಿಪದವರ್ಗೆ ಭಕ್ತಿ
ಯಿಂ ಕೇಳ್ದವರ್ಗೆ ‖ ಸಂತತಂ ಸಕಲಸುಖಮಂ ಸಕಲ ಭೋಗಮುಮ |
ನಂತರ್ಪಭಾಗ್ಯಮಂ ಕೊಟ್ಟು ರಕ್ಷಿಸುವನಾ | ಕಂತುಹರನಪರಾವ
ತಾರನೆನಿಸುವ ಚನ್ನಬಸವೇಶನಲ್ಕರಿಂದಂ ... ‖೫೫‖

ಎರಡನೆಯ ಕಾಂಡದಲ್ಲಿ ೫ನೇ ಸಂಧಿ ಮುಗಿಯಿತು.

## ೬ನೇ ಸಂಧಿ.

ಸೂಚನೆ‖ ಪಂಕಜಭವಂ ಶಿವನನೋಲೈಸೆ ತಂನಿಟಲದಿಂ| ಶಂಕರಂ
ಜನಿಸಲ್ರುದ್ರಗ್ರಮಂ ಕಾಣುತೆಭ | ಯಂಕರದೊಳೆಜನಭವ
ನನ್ನತಿಸಲರ್ದನಾರೀಶ್ವರತ್ವದೊಳೆಸದನು‖

ಪ‖ ಕಾಲಕಂಧರ ನಿಜಪಾಲವಿಧೃತವರ್ಣ | ಚೇಲಪಿನಮಿ
ತಪದವಿಶಾಲತರಮುಹುಮಶತ | ದೂರ್ಜಲಚರ್ಮಾಂಬರಸುಶೀಲನಾ
ನಾಲೋಕಪಾಲವಂದಿತಪದಾಬ್ಜ ‖ ಕೈಲಾಸಶಿಖರಿರಾಜಾಲಯಸ್ಥಿತ
ಹೃಮ| ಶೈಲಜಾವರಸರ್ಪಜಾಲಭೂಷಣಲಸದ್ಭಾ | ಳಾಕ್ಷಲೋಕ
ಮಂ ಪಾಲಿಸ್ಯೆ ಪಂಪಾವಿರೂಪಾಕ್ಷ ದನುಜಶಿಕ್ಷ ‖೧‖ ವಿರಚಿಸುವೆನಿಂ

ನಾಲಿಸ್ಯೆಸಿದ್ಧರಾಮೇಶ, ಸರಸಿರುಹಸಂಭವಂಸೃಷ್ಟಿಯುಂಮಾಳ್ಪನೆಂ।
ದಿರದೆಚಿಂತಿಸಿಮುನ್ನಮಾಡಿರ್ದಸತ್ಯದಿಂಸೃಷ್ಟಿಯುಳವಲ್ಲಬರಲು ॥
ಚಿರಕಾಲವಿಮಾಶನಂಕಳೂರ್ತ್ತಿತಪವಮಾಳ್ಕುಡೆ। ಹರನೊಲಿದುಬೊಮ್ಮ್ರ
ನೆಡೆಗೈತಂದುಮೆಚ್ಚಿದೇಂ। ವರವದೇಬೇಡೆನಲ್ಕೊಂಡಾಡಿಕೈಮು
ಗಿದುಕಮಲಭವನಿಂತೆಂದನು ॥೧॥ ದೇವನಿನ್ನಾಜ್ಞೆಯಿಂಸೃಷ್ಟಿಯಂ
ಮಾಳ್ಪನೆಂ। ದಾವಾವತೆರದೊಳಂನೋಡೆನಿಂನಯುಸಹಾ। ಯಾವಲಂ
ಬನವಿಲ್ಲದಾಗದೀಸೃಷ್ಟಿಮುಂನಿಂದಧಿಕಮೇನ್ಮಾಳ್ಪನು ॥ ನೀವೆ
ನ್ನದೇಹದೊಳ್ಜನಿಸೆಂದುಕಮಲಜಂ। ದೇವದೇವನನಜಾತನನ
ಪ್ರಮೇಯನಂ। ಭಾವಶುದ್ಧಿಯೊಳ್ಕೊಂಡಾಡಲ್ಕೆಶಂಕರಂಬ್ರಹ್ಮನೊ
ಡನಿಂತೆಂದನು ॥೨॥ ಬೇಡಿದವರವನಿಂತುನಿಂನೊಡಲೊಳಾನೊಡೆ
ದು। ಮೂಡಿದಾಗಳೆನಿನಗೆವಿಲಯುತಪ್ಪದುಮರುಳೆ। ಬೇಡವೀವರ
ವೆನಲಾಕ್ಕದೊಡಾಗಲಿಕರುಣಿಸೆನಲಂತೆಮಾಳ್ಪನಿಂತು ॥ ಮಾಡುತಿ
ರುತಪವಂಮನಃಪವನಯೋಗದಿಂ। ನೋಡುನಿಶ್ಚಲದೃಷ್ಟಿಯಿಂನಿಜ
ಸಮಾಧಿಯೊಳು। ಕೂಡಿರೆಂದಭವನಾಜ್ಞಾಪಿಸಿನಿರಾಕಾರಮಂತಳೆದ
ನಾಕ್ಷಣದೊಳು ॥೩॥ ಸ್ಫಟಿಕಭಾಂಡದೊಳೆಸವಜ್ಯೋತಿಯಂದದೊಳೆ
ಜನ। ಘಟದೊಳಗಷ್ಟಕ್ರಮಂಭೇದಿಸುತ್ತಜನ। ನಿಟಿಲಮಧ್ಯದೊ
ಳೊಡೆದುಮೂಡಿದನುಮಾಶಕ್ತಿಸಹಿತಮ್ಮಹೇಶನಂದು॥ ಪಟುತರ
ದಶತಕೋಟಿಬಾಲರವಿತೇಜಮುಂ। ತ್ಕಟತಿಮಿರದೊಡನೆಬೆರಸಿದು
ದೊಪೇಳೆಂದೆನ। ಲ್ಕುಟಿಲಸ್ವರೂಪನೊಪ್ಪಿದನಜನತನುವೆರಳ್ಪೋಳಾ
ದುದಾಕ್ಷಣದೊಳು ॥೪॥ ಇಂತಜನತನುವೆರಳ್ಪೋಳಾಗಿಬಿಟ್ಟಸಮ।
ನಂತರದೊಳತಿರೌದ್ರದಿಂರುದ್ರಮೂರ್ತಿಯಂ। ತಾಂತಳೆದನಾಮ
ಹೇಶಂಕಮಲಸಂಭವನ ಚಿತ್ತ್ರದಜ್ಞಾನದಿಂದಂ ॥ ತಾಂತವೆಮುಪಾ
ಕಾಳಿಯಾದಳುಮೆಯುವರೀರ್ವರ್। ರೆಂತಿರ್ದರೆನೆಬಾಲಚಂಡಾಂಶು
ಮಂಡಲೋ। ಪಾಂತದೊಳುರಂಜಿಸುವನೀಲಮೇಘದತೆರದೆದಂಪ
ತಿಗಳೆಸದಿರ್ದರು ॥೫॥ ಬಳಿಕರುದ್ರಮ್ಮಹಾಕಾಳಿಯೊಳುಸಂತಸ
ದೊ। ಳೊಲಿದುಕಿರಿಡಿಸುತನಾನಾವಿಲಾಸಂಗಳಿಂ। ಕೆಲವುಕಾಲಂ
ಗಳಂಕಳೆವುತಿರೆನೀಲಲೋಹಿತಮುಖ್ಯರುದ್ರಗಣಮುಂ ॥ ಬಾಲವಿ
ಕರಣಯುರುಬಲಪ್ರಮಥಿನಿಯರೆಂಬ। ಪಲತೆರದಶಕ್ತಿ ದೇವಿಯು
ರಾದರಿವರನಂ। ದೊಲಿದುದಂಪತಿಗಳಮ್ಮಾಡಿ ಯಾರುದ್ರಗಣದೊ
ಡನೆಸುಖಮಿರುತಿರ್ದನು ॥೬॥ ಕರುಣದಿಂದಮ್ಮಹಾರುದ್ರನಾಕ
ಮಲಜನ। ಬಿರಿದಸೀಳೆರಡನೊಂದಿಸೆಮಲಗಿದಪರೇಳ್ವೊ। ಪರಿಯೊ

ಳೆಟ್ಟತ್ತು ಭಯಮೂರ್ತಿಗಳರೌದ್ರಸ್ವರೂಪನೀಕ್ಷಿಸಿಭಯದೊಳು॥ ಹರಹರಾನಿಮ್ಮುಗ್ರಭಯಮೂರ್ತಿಗಳರೌಗ್ರದಿಂ। ದಿರವಿಗೀಗೆನ್ನಹೃದಯನ್ನಡುಗುತಿದೆದೇವ। ಕರುಣಿಸುವುದೀಕರೂಪಿಂದೆನಲ್ಕರ್ಧನಾರೀಶ್ವರಂತಾನಾದನು॥೮॥ ನೀಲಮಾಣಿಕ್ಯಮೆಗಡೊಂದಾದಮೂರ್ತಿಸ। ಲ್ಲೀಲೆಯಿಂಮುಡಿಯುಮಂಜಡೆಯುಮುನ್ನವರತ್ನ। ದೋಲೆಯುಂಕುಂಡಲಮುನೆಸವಕಂಠಾಭರಣಮುಂಪೊಳೆವತಳಿಮಾಲೆಯುಂ॥ ನೀಲೋತ್ಪಲವನತುಳಶೂಲಮುಂಚಾರುಮಣಿ। ಜಾಲಮುಂಪನ್ನಗಾಭರಣಮುಂನೂತನದು। ಕೂಲಮುಂಚರ್ಮಾಂಬರವನಾಂತುದೆನಲರ್ಧನಾರೀಶ್ವರಮ್ಮೆರೆದನು॥೯॥ ಇಂತರ್ಧನಾರೀಶ್ವರಾಕಾರಲೀಲೆಯಿಂ। ಸಂತಸದೊಳಾಮಹಾರುದ್ರನಿರುತಿರೆಕಂಡು। ಮುಂತೆಕಮಲಾಸನಂಮುಯ್ಕೈಮುಗಿದುಭಯಭರಿತಭಕ್ತಿಯಿಂದಂ॥ ಅಂತರಹಿತನನದ್ವಿತೀಯನನಜಾತನನ। ನಂತಮಹಿಮನನವ್ಯಯನನಪ್ರಮೇಯನಂ। ಸಂತೋಷದಿಂದಕೊಂಡಾಡಿನಾಂಸೃಷ್ಟಿಯನದೆಂತುಮಾಡುವೆನೆಂದನು ॥೧೦॥ ಕೇಳಾದೊಡೆಲೆಚತುರ್ಮುಖಜಗತ್ಸೃಷ್ಟಿಯಂ। ನೀಲಲೋಹಿತಮುಖ್ಯರಾಗಿರ್ದರುದ್ರಗಣ। ಜಾಲಸಹಿತಮ್ಮಾಡುನೀನೆನಲ್ಕವರರೌದ್ರಸ್ವರೂಪಂಕಾಣುತಂ॥ ತಾಳಿಬಸುಭೀತಿಯಂಸಾಕಿವರನೊಲ್ಲೆನೆನೆ। ಭಾಳಾಂಬಕಂನಕ್ಕುನೀ ಮುನ್ನಿನಂದದಿಂ। ದೇಳಿಗೆಯುಸೃಷ್ಟಿಯಂಮಾಡೆಂದುಕರುಣದಿಂವರವಿತ್ತುಬಯಲಾದನು ॥೧೧॥ ಇಂತಂದುಶಂಕರಂವರವಿತ್ತುಪೋದಸಮ। ನಂತರದೊಳೆಜನಾಮುಹೇಶನಾಜ್ಞೆಯನಾಂತು। ಪಿಂತೆಲೋಕಸೃಷ್ಟಿಯಂತಾದುದಾತೆರದೊಳಂತಾನೆಸುರ್ಗಿಸಿದನು ॥ ಮುಂತೆನಾನಾದೇವಸಂತತಿಗಳುಂಸಹಿತೆ। ಸಂತೋಷದಿಂಸತ್ಯಲೋಕದರಮನೆಯೊಳಗ। ನಂತವೈಭವದಿಂದಲೊಡ್ಡೋಲಗಂಗೊಟ್ಟುಮೆರೆದಿರ್ಪನುತ್ಸವದೊಳು॥೧೨॥ ಇಂತೆಸವಚನ್ನಬಸವೇಶನಪುರಾಣಮುಂ। ಸಂತಸದಿಬರೆದವರ್ಗೋದಿದರ್ಗರ್ಥಮಾ। ದ್ಯಂತಮುಂಬಿಡದೆಪೇಳ್ದರ್ಗೆಪಠಿಸಿದವರ್ಗೆಭಕ್ತಿಯಿಂಕೇಳ್ದವರ್ಗೆ॥ ಸಂತತಂಸಕಲಸುಖಮುಂಕಸಲಭೋಗಮುನ। ನಂತಸೌಭಾಗ್ಯಮುಂಕೊಟ್ಟುರಕ್ಷಿಸುವನಾ। ಕಂತುಹರನಪರಾವತಾರನೆನಿಸುವಚನ್ನಬಸವೇಶನಕ್ಕರಿಂದಂ ... ... ॥೧೩॥

ಎರಡನೆಯಕಾಂಡದಲ್ಲಿ ೬ನೇಸಂಧಿಮುಗಿಯಿತು

೭ನೇಸಂಧಿ.

**ಸೂಚನೆ॥** ಸರಸಿಜೋದ್ಭವನಿರದಹಂಕರಿಸಿನಿಂದಿಸ, ಲ್ಪುರಶಿ

ವಂಕೇಳ್ದು ಭೈರವರೂಪಿನಿಂದವನ । ಶಿರವನರಿದುರುಲೀಲೆಯಿಂ
ಚನ್ನಬಸವನಾಸಿದ್ಧರಾಮಂಗೊರದನು ॥

ಪದ॥ ಪೊಂಬಣ್ಣದಿಹಜಡೆಯು ಬಂಬಲೊಳ್ಥಳಥಳಿಸು । ವಂಬರಾಪಗೆಯತಿಮಲಾಂಬುವೊಳ್ಳೋಡೆಪಡಿ । ಬಿಂಬಿಸುವಚಲ್ವುವಡೆದಂಬುಜಾರಿಯುಕಲೆಯು ತುಂಬಿನವಕಂಧರದೊಳು ॥ ಲಂಬಿಸುವಭೂಷಣಣಾಕದಂಬಗತತಕ್ಷುಚ । ರ್ಮ್ಮಾಂಬರದಕಮಲಜಶಿರಂಬಿಡಿದಕರದಲೋಕಾಂಬಿಕಾನಾಥಪಂಪಾವಿರೂಪಾಕ್ಷನಿಷ್ಟಂಬಿಡದೆಸಲಹೆಮ್ಮನು ॥೧॥ ಆಲಿಸಿನ್ನೆಲೆಸಿದ್ಧರಾಮ ಪಂಕಜಗರ್ಭ । ನೋಲಗದೊಳೊಪ್ಪುತಿರೆ ನೆರದಿರ್ದಮುಖ್ಯಮುನಿ । ಜಾಲವೊಡನೆದ್ದು ಕೈಮುಗಿದು ಭಯಭಕ್ತಿಯಿಂ ಕೊಂಡಾಡಿ ಕಮಲಜನನು ॥ ಕೇಳಿದೆವಿಧಾತ ನಿತ್ಯನದಾವನಂಜಗಕೆ । ಲೀಲೆಯಿಂದವನಸರ್ಜಿಪೆವು ನೀನಿಷ್ಟಯಂ । ಪೇಳಿದೆಂದೆನಲಬ್ಜಪಾಸದೊಳವರ್ಗೆ ಸರಸಿಜಜಾತನಿಂತೆಂದನು ॥೨॥ ಈಸಕಲಜಗದಸೃಷ್ಟಿಸ್ಥಿತಿಪ್ರಳಯಂಗ । ಳೈಸು ನನ್ನಾಧೀನವೀಭಾರವಂಪೊತ್ತು । ನೀಸುವವನಾನಲ್ಲದಾರುಂಟು ತಿಳಿಯೆ ಸಚರಾಚರಕೆ ಪೂಜ್ಯರು॥ ವಾಸವಮುಕುಂದರುದ್ರಮುಖ್ಯಸುರರೆನ್ನ । ನೇಸನಾಸ್ತ್ರತ್ಕಮಲಮಧ್ಯದೊಳ್ಧ್ಯಾನಿಸುವ । ರಾಸುರಜ್ಯೇಷ್ಠತಾನೇಪರಬ್ರಹ್ಮವಂನಿಂದಧಿಕವಿಲ್ಲೆಂದನು ॥೩॥ ಇಂತೆಂದುವಿಧಿಯುವರೊಳಾಡುತಿರಲತ್ತಲಾ । ಕಂತುಪಿತನರಿಪೀತನಜ್ಞಾನವಂತಿಳಿದು । ಸಂತತಂಸುಜ್ಞಾನಿಯಪ್ಪಂತೆಮಾಳ್ಪೆನೆಂದೈತಂದುಮುಂದೆನಿಂದು ॥ ಇಂತಿದೇನ್ಯಬ್ರಹ್ಮನಿಮ್ಮೇರೆದಪ್ಪಿದೊಡೆ । ಸಂತವಿಡುವವರಾರಿದೇಕೆಮರುಳಾದೆಕಾ । ಮಾಂತಕನಮಾಯೆಯಿದು ನೀನರಿಯದವನಕೇಳೆನುತಮುತ್ತಿಂತೆಂದನು ॥೪॥ ನೀನೆಜಗತ್ಸೃಷ್ಟಿಕರ್ತುರಕ್ಷಿಸ್ಪುವಾತ । ನಾನೆನಗೆನಿಸಗೆನಾಥಂಶಂಭುಕೇಳಂತ । ನೀನಿತ್ಯನಾತನೇಪರದೈವಮಾತನೇಸಕಲಜೀವಾಧಾರನು ॥ ನಾನುಂಕಮಲಗರ್ಭ ನೀನುದಯಾದವ । ಗೇರ್ನೈಸ್ವತಂತ್ರಮಾತನಸೂತ್ರದವರಾವು । ನೀನಿಂತುಗರ್ವಿಪರೆನಂಬದೊಡಸಕಲವೇದಂಗಳಂಕೇಳೆಂದನು ॥೫॥ ಸಾಮಯಜುಸಥರ್ವಣಮುಮಾಬು । ಕಾಲ್ಪಮುವೇದಂಗಳಾಕಾರವಂತಳೆದಿಪಿ । ತಾಮುಹನಸಭೆಗೆಬಂದೆಲೆಪಾಪಿಯು ತ್ಯತಿಷ್ಠದ್ದಶಾಂಗುಳನೆನಿಪ್ಪ ॥ ಆಮಹೇಶ್ವರನದ್ವಿತೀಯನಾತನೆಯುಭವ । ನಾಮುಹುಮನೇಸಕಲಲೋಕದಾಧಾರನಿಂ । ತೀಮರುಳುತನವೇನೆನಲ್ಕೆ ನಿಜರೂಪಿನಿಂಸತ್ಪ್ರಣವುನಿಂತೆಂದುದು ॥೬॥ ಆಜನನನ್ಯಯನನಗುಣನನಪ್ರಮೇ

ಯೆನಂ। ತ್ರಿಜಗವಂದಿತನನನುಪಮನನಮಲಾಂಗನಂ । ಗಜದಾನವ
ಪ್ರಮರ್ದನನನಮ್ಮಹೇಶನಂ ಸಾಕ್ಷಾತ್ಪರಬ್ರಹ್ಮವ॥ ಅಜಹರಿಕುನಿಂ
ದಿಸಿಯೆಹಂ ದೇವನೆಂದೆಂಬ । ಗಜಬಜಂ ಪಿಂತೋರುವವಂತೆನ್ನ ತಾ
ಯ್ಗಿಂಚೆ ನಿಜವೆಂಬಗಾದೆಗೀಡಾದೆನಿನ್ನಿಂ ಮರುಳೆರಾರೆಂದುಬಯು
ಲಾದುದು॥೭॥ ಇಂತು ನಿಗಮೋಂಕಾರವಾಕ್ಯಂಗಳೆಂ ಕೇಳ್ದು। ಕಂತು
ಪಿತನಾಸ್ಯಮಂ ನೋಡಿಬಿರುನುಡಿಯುಬೊಂ। ಮಂತವೆಪೊಗಳ್ದು ಡಾ
ಸತ್ರಿಗರ್ಧದೇಹಮಂ ಕೊಟ್ಟಾತನಂ ಸಭೆಯೊಳು ॥ ದಂತಿಚರ್ಮವನು
ಟ್ಟಶ್ರುಚಿಯ ಶ್ಮಶಾನದೊಳು । ಭ್ರಾಂತಿಯಿಂದಿರ್ಪ ಶುಭಮೂರ್ತಿ
ಯಂ ಕೇಳ್ದವರ ।.ದಂತುನಂಬುವರೊ ತಿರುಕನವನಾತನೆಂದಜಂಜರೆ
ಯುತಿರಲಾಕ್ಷಣದೊಳು ॥೮॥ ಪುದಿದಘೋರಾಂಧಕಾರವು ನೆಕಡಿ
ಸುವನೆನು। ತ್ತುದಯಿಸುವಮಾರ್ತಾಂಡಮಂಡಲಪ್ರೋಸಲೆಸ್ಕೃದಯು। ಸ
ದನದಜ್ಞಾನಮಂ ಪೋರಮಡಿಸಿನೆಲೆಗೊಂಬ ಸುಜ್ಞಾನಮಂ ಬಂತಿರೆ॥ ಮ
ದದಿಂದಮುಂಗಾಣದಜನಿದಿರೊಳುಂ ಪಂಚ । ವದನದಶಭುಜಪಂಚ
ದಶಲೋಚನಂಗಳಿಂ । ಸೊದೆದಪ್ಪಿ ದೊವಲಕೆಂಜೆಡೆಯು ಮಂಜುಳೆ
ಕಾಯನಾಕ್ಷಣಂ ಮೂಡಿರ್ದನು ॥೯॥ ಮುಂದೆ ಪ್ರತ್ಯಕ್ಷವಾಗಿರುತಿ
ರ್ದ ಸಾಕ್ಷಾತ್ಪು। ರಂದರಪ್ರಮುಖಬೃಂದಾರಕಾವನತನಂ। ಮಂದ
ಮತಿಕಮಲಜಂ ನೋಡಿಪಾಸ್ಗೋಕ್ತಿಯಿಂದೀತನೇ ಜಗದೊಡೆಯ
ನು॥ ನೊಂದಪ್ಪದುಸ್ತೊಡೆನಗೆಗೆಯುವನಬಹುರೂಪಕಣ್ಗಾದವಾಗಿದೆ
ನೋಡಿನೀವೆಲ್ಲರುಂ ಕಾಣಿ । ನೆಂದೆನ್ನ ಬೇಡೆವು ತಕೆಲದವರಕೈನೋ
ಯ್ವನಕ್ಕ ಮತ್ತಿಂತೆಂದನು॥೧೦॥ ತಿರುಕುಳಿಗೆಮಾನವೆತ್ತಳದಂತೆತ
ಲೆಮಾಲೆ। ಗೊರಲಂಗೆಮುಹಿಮೆಯೆಲ್ಲಿಯದು ಸಲೆಸರ್ಪನಾ। ಭರಣಂ
ಗೆಚಿರಮೆಂತು ಸುಡುಗಾಡೊಳಿರ್ಪಂಗೆ ಶುಭಮಾವುದೀ ಮರುಳಿಗೆ॥ ನಿ
ರುತವಿದಾ ಪಂಚವದನಗಪೇರ್ಮೆಯೈಸೆ ತಾಂ । ಧರಿಸುವೇಂ ಪಂಚವ
ದನವನೆಂದು ಮೇಣೊಂದು। ಶಿರವನಬುಜಾಸನಂಸೃಜಿಸಿ ತಚ್ಛಿರದೊ
ಳೀಶಂಭುಮಂ ನಿಂದಿಸಿದನು ॥೧೧॥ ನೀನಂತೆ ಸಕಲಜಗದಾಧಾರನೀಂ
ಮುಖ್ಯ । ನಾನಾಸುರಾವಳಿಗೆ ನೀಂ ಕರ್ತುಗಡನಿನ್ನ । ನೇನುತಿಪ
ದಂತೆ ವೇದವ್ರಾತ ಮಾವಗಂ ನೀಂ ಪರಬ್ರಹ್ಮವಂತೆ ॥ ನೀನೆಲ್ಲಿಜನಿಸಿ
ದೆಯದಾತರ್ಗಂದೆತಾಯ್ಗಳ್ಳಿ। ಧಾನವಂ ಮೊಡನುಸುರುವೆಂದಜಂ ನು
ಡಿದನಿಂ। ದಾನಗುತಮೇಸ್ತೋತ್ರಮಾಯ್ತು ಸರ್ವೇಶ್ವರನಮುಹಿಮೆ
ಯೆಂತೋ ಜಗದೊಳು ॥೧೨॥ ಮತ್ತೆ ಕಮಲಜನಭವನಂಜರೆದು ನೀ
ನಿಂತು । ಪೊತ್ತಜೋಹಂಗಳಂ ಬಿಟ್ಟೆನ್ನ ಪೊರ್ದನಿನ । ಗುತ್ತಮಪ

ದಂಗಳೆಂಕೊಟ್ಟಪೇೞೆಂಬುದುಕಲ್ಗದೊಡೆನಿನ್ನಸದೆದಸುವನು॥ ನೆತ್ತಿಯೊ
ಳುತಗದಪೇೞೆಂನೋಡೆಂದುಘುಡುಘುಡಿಸು। ತೆತ್ತಲುಂನೆರದದೇವ
ವ್ರಜಂಬೆದರೆಪೞಿ, ವೃತ್ತಿದರ್ಸನಂಬುಜಾಸನಾಕ್ಷಣದೊಳೊಂದುಕಾ
ತುಕವನೇನೆಂಬೆನು ॥೧೩॥ ಪಲಬಗೆಯಕರದಾಯುಧಂಗಳಿಂಕಂಗ
ಳಿಂ। ಥಳಥಳಿಪಚಾರುಮುಖದೋೞಿಯಿಂಪಾಳಿಯಿಂ। ದೊಲದೊ
ಲದುಪೊಳೆವಫಣಹಾರದಿಂಕ್ರೂರದಿಂದದ್ಭುತಾಕಾರವಾಗಿ॥ ಜಲಜ
ಭವನೋಲಗದವರ್ಕದರೆವಿಧಿಬೆದರೆ, ಜಲಜಲನೆಬೆಮರುತಿರಲುಗು
ರಿಂದಹೊಗರಿಂದ, ಹೊಳೆವಜೊಮ್ಮನನೂತನಾಸ್ಯಮಂಹಾಸ್ಯಮಂ
ಮಾಡೆನುತಹರನುಡಿದನು ॥೧೪॥ ಘೋರತರಭೈರವಾಕಾರದಿಂಹರ
ನೆಡದ। ಕೂರುಗುರಿನಿಂದಜನಶಿರವರಿಯೆನವರಕ್ತ। ಧಾರಾಪ್ರವಾ
ಹದಿಂಸಕಲಲೋಕಂಗಳಿರದಾಕ್ಷಣಂಮುಳುಗುತಿರಲು॥ ಓರಂತೆಹರ
ನೊಲಿದುತನ್ನಭಾಳಾಕ್ಷದಿಂ। ತೋರಕಿಡಿಯಂಬಿಡಲ್ಕಾಕ್ಷಣಂರುಧಿ
ರಮಂ, ಪೀರಿಮುರಿದಜನಶಿರವಂಪೋಳ್ದುದಭವನಮಹಾತ್ಮೆಯಂಪೊ
ಗಳಲಳವೆ॥೧೫॥ಕಂಡನಾಸಮಯದೊಳುಕಮಲಜಂಹರಕರದೆ। ಖಂ
ಡಿಸಿದತನ್ನುತ್ತಮಾಂಗಮಂರುಧಿರಜಲ। ಮುಂಡುಪೋೞಿಸಿದನಯ
ನಾಗ್ನಿಯಂಪೊಗಳುತಿಹಸಕಲವೃಂದಾರಕರನು॥ ಕೊಂಡಾಡುವಖಿ
ಳವೇದಂಗಳಂನುತಿಯಿಸುವ। ಪುಂಡರೀಕಾಕ್ಷನಂಶಿವಶಿವಾತಿಳಿಯ
ದು, ದ್ವಂಡವೈಪದಕೂಡಸೆಣಸಿದೇಂತಾನೆನುತಮುಂಡೆಯೋೞ್ಕೈಯಿ
ಟ್ಟನು ॥೧೬॥ ಹರನೊಡನೆಸೆಣಸಾಟವೆಂತುಟೊನುತವಿಶ್ವ। ಭರಿತ
ನೊಳಹಂಕಾರವೆತ್ತಣದೊಲೋಕಸಂ। ಹರನೊಡನೆನಿಂದಿಸುವ
ದೇನೋಮಹಾಮಹಿಮನಿದಿರೊಳುಬಾಸನದೊಳು॥ ಇರವೆಂತೊ
ಕಂಡುಕಂಡುಂಕೇೞಿಕೇೞಿಯಾಂ, ಮರುಳಾದೆನ್ನೈಸೆತವಮಹಿಮೆಯಂ
ಸಾಕುೞಿಗ। ಶಿರವಿುಂಸವರುಶ್ಯೆವದ್ರೋಹಿಯಾನೆಂದುವಿಧಿಯೆರಗಿ
ದಂಪದದೊಳು ॥೧೭॥ ಕಂಬನಿಗಳಭಿಷೇಕವಾರಿಕಣಮುಕುಟಾವ,
ಲಂಬಮಣಿಪುಷ್ಪಸಂದೋಹಮಾನುತಿಮಂತ್ರ। ಮಿಂಬಾದನಯನಂ
ಗಳೇದೀಪಸಂಕುಲಂತಾನಾಗೆಭಕ್ತಿಯಿಂದ॥ ಅಂಬುಜಭವಂಶಂಭು
ಪೂಜಾನಿರತನಾದ। ನೆಂಬಂತೆತಾನೊಪ್ಪುತಿರೆಸಕಲಸುಮನಸಕ,
ದಂಬಕಂಜಯಜಯತ್ರಾಹಿಮೃತ್ಯುಂಜಯತ್ರಾಹಿಯೆಂದೆನುತಿರ್ದ
ರು॥೧೮॥ ಕೊಂಡಾಡುವಖಿಳದೇವವ್ರಜಮನಾಕ್ಷಣಂ। ಖಂಡಪರಶು
ಕೃಪಾಬ್ಧಿಯೊಳಗೆಮುಳುಗಿಸಿಪಾದ। ಪುಂಡರೀಕಕ್ಕೆನತನಾದವಾ
ಣೀವರನನೊಲವಿಂದೆನೆಗಪಿಬಳಿಕ॥ ಮುಂಡೆಯೊಳುಕೈಯಿಟ್ಟುಬೆದ

ರಚೇಂದೆಂದುಮುಖಿ | ಮಂಡಲದೊಳೊಗೆವ ನಸುನಗೆಯಿಂದ ಮಾಸತಿಯು | ಗಂಡನಂ ನೋಡಿ ಕರುಣಾರಸದ ವೃಷ್ಟಿಯಂ ಕರೆದವರ ಬೀಳ್ಕೊಟ್ಟನು ||೧೯|| ಇಂತೆಸೆವ ಚೆನ್ನಬಸವೇಶನ ಪುರಾಣಮಂ | ಸಂತಸದಿ ಬರೆದವರ್ಗೋದಿದರ್ಗರ್ಥವಾ | ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ || ಸಂತತಂ ಸಕಲಸುಖಮಂ ಸಕಲಭೋಗಮನ | ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ | ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಳ್ಕರಿಂದಂ ||೨೦||

ಎರಡನೆಯ ಕಾಂಡದಲ್ಲಿ ೭ ನೇ ಸಂಧಿ ಮುಗಿಯಿತು.

## ೮ ನೇ ಸಂಧಿ.

ಸೂಚನೆ|| ಬೊಮ್ಮನ ಕಪಾಲಮಂ ಪಿಡಿದು ಭಿಕ್ಷಕೆ ನಡೆದು | ಹೆಮ್ಮನಿಂ ಹರಿಯ ಭಕ್ತಿಯನೋಡಿ ಕೃಪೆಮಾಡಿ | ದಮ್ಮಹೇಶ್ವರನಿಳದೆ ಸುರಪುರಕೆ ಬಂದು ಸುರಸತಿಯರಂ ರಕ್ಷಿಸಿದನು ||

ಪದ|| ಹಸ್ತಧೃತವಾಗೀಶಮಸ್ತಕ ಗಿರೀಂದ್ರತನು | ಜಾಸ್ತನವಿಲಿಪ್ತನವಕಸ್ತೂರಿಕಾವಕ್ಷ | ಸುಸ್ತವಪ್ರಿಯತರ ಸಮಸ್ತದಿವಿಜಾವಳಿ ವಿನಿಸ್ತರಿತಕೀರ್ತಿಭೂಷ || ಸ್ವಸ್ತಿಮಾಲಪ್ರಶಸ್ತ ಹಿಮಕರ ಬುರಗ | ಭಸ್ತಿಕೋಟಿಪ್ರಭಾವಿಸ್ತೀರ್ಣಸಂಪಾಪು | ರಸ್ತರಣಶರಣಜನಭಕ್ತಿವರ ವಿರುಪಾಕ್ಷಸುಸ್ಥಿರದೊಳ್ಸಲಹೆಮ್ಮನು ||೧|| ಆದರದೊಳಿನ್ನಾತ್ರಿಸ್ವೈರಾಮವಿಧಿಶಿರ | ಚ್ಛೇದದಲೀಲೆಯೊಳಂ ಕಪಾಲಹಸ್ತನುಮಹ | ತ್ತಾದಭೈರವರೂಪನುಳಿದಾಗ ವಿಷ್ಣುಮೊದಲಾದವರ್ ಭಕ್ತಿಗಳನು || ಭೇದಿಸುವೆನೀ ಶಿರಕೆ ತುಷ್ಟಿವಡಿಪುದರೊಳಂ | ದಾದಿರಹಿತಂ ಶಿವಂ ಭಿಕ್ಷಾಟಣವನೆವದೊ | ಳಾದಿವ್ಯರೂಪದೊಳ್ಪುರಮುಟ್ಟಖಿಳಸ್ತ್ರೀಗಣಮೈದೆಕೊಂಡಾಡಲು ||೨|| ಕೋಟಿಶಶಿಕಳೆಗಳಂ ಜರೆವನಗೆಮೊಗದರವಿ | ಕೋಟಿತೇಜಂಗಳಂ ಪಳಿವ ತನುರುಚಿಯು ಶತ | ಕೋಟಿಮನ್ಮಥಮಧುಜಯಂತನಳಕೂಬರರ ಸೌಂದರ್ಯಮಂ ಮೀರುವ || ಕೋಟಿಲಾವಣ್ಯಮಂ ಬಣ್ಣಿಪೊಡೆ ಕೊಟಾನು | ಕೋಟಿಶೇಷರ ಬಗೆಗಸಾಧ್ಯಮೆಂದೆನೆ ಜಟಾ | ಕೋಟೀರಭಾರನಾ ಹರಿಯ ಭಕ್ತಿಯನೊಳ್ಪೆನೆಂದಾಗ ನಡೆಗೊಂಡನು ||೩|| ಪೊಳೆವ ಕಂಜದೆಡೆಯ ಭಸಿತತ್ರಿರೇಖೆಯನೊಸಲು | ಲಲಿತಪುರುಲತೆಯ ಥಳಥಳಿಪ ಕಂಗಳ ಚೆಲ್ವು | ದಳೆದ ನಾಸಿಕದ ಸುತಿಪಲ್ಲಬಾಯ್ದೆರೆಯ ಚುಬಕದ ಕರ್ಣಯುಗಳಂಗಳ || ತೊಳಪ ಮಣಿಕುಂಡಲದನುತ ಕಪೋಲಂಗಳೊಳ್ | ಗಿಳಿವ ಶೃಂಗಾರರಸಮಂ ಬಂತೆಯಡಿಗಡಿಗೆ | ಮೊಳೆವ ಕಿರುಬೆಮರ ವದನದ ವಿಜಿತಮದನನಾ ಮೋಹಿಸದನನ್ನ

ಡೆದನು॥೪॥ ಕಾಯಜದಹನಭಸಿತವಗಣಿತರವಿಪ್ರಭಾ । ಕಾಯದೊ
ಳ್ತೊಳಗೆತಿಸುಳೆಂಬಲದಕರಕಮಲ । ಕಾಯತಮದಾಗಿರಂಜಿಸೆವಾ
ಮಕರಕಮರಿವಿಧಿಕಪಾಲಂ ಮೆರೆಯಲು॥ ಪ್ರಾಯಮೆರೆದೆಣ್ಬರಿಸಮು
ಳವಡಲ್ತನ್ನಭಿ। ಪ್ರಾಯಮಾರ್ಗಯುಮಿಂಬುಗೊಡದಿರಡದನ। ಪ್ರಾ
ಯಾಸಯತ್ನದಿಂಬಿಲ್ವಿಡಿದು ಸತಿಯುರಂಜ್ಯೆಸುವಂಗಜನತೆರದಿ ॥೫॥
ಸಿಂಗರದಕರುವ್ರೋಮುಕ್ತಿಯುಗುರುವ್ರೋಮೋಹರಸ। ದಿಂಗಡೆಲೋಸು
ಕೃತದೊಡಲೊಸೌಖ್ಯಲತೆಯ ಪ್ರೊಸ। ಮುಂಗುಡಿಯೊಮೋಕ್ಷದೆಡೆ
ಯೊಸೊಗಸುವೀಡೋಪ್ರಣವದಜೋಡೊಸಲೆಭಾವಿಸೆ॥ ಮಂಗಳಾ
ಕಾರವೋಶಿವತತ್ವಸಾರವೊಅ । ಸಂಗರಾಜ್ಯದಬೆಳೆಯೊಭಕ್ತಿಕಳೆ
ಯೋಯೆಂದು। ಪಿಂಗದತಿಕಾಮಿಯೋಗಿಗಳೀಕ್ಷಿಸಲ್ಕೋಸಬೊಮ್ಮ
ನಡಿಯಿಟ್ಟನಂದು ॥೬॥ ಇಂತಪ್ಪಸಿಂಗರವ ಸಾಂತುನಡೆತಂದು ಮಾ।
ಕಾಂತನಾ ಮಾಕಾಂತಭಕ್ತಿಯಂಕಾಣ್ಬಧಿಕ। ಸಂತಸದೊಳಮಲವೈ
ಕುಂಠಪುರಕಾಗಿನಡೆತಂದು ಪೊರವಳಯಸಿರಿಯಂ॥ ಅಂತಂತು ನೋ
ಡಿಮೆಚ್ಚುತ್ತೊಡನೆಬಾಗಿಲ್ಗ। ಳಂತರಂಗಳಿದು ನಡೆತರುತಿರಲ್ಕಾಪುರ
ದಕಾಂತಾಜನಂಕಂಡು ಕೇಳ್ದೊಡನೆಸೋಲ್ತು ಜೆಂಬಿಡಿದು ಬೀದಿಯೊ
ಳೈದಿತು॥೭॥ ಮುಡಿಯುಮಂಸೈತಿಡುವ ಪೂಗಳೆಂಮುಡಿವಚೆ। ಲ್ವಿ
ಡಿದಮಣಿಭೂಷಣಂದೊಡುವ ಸೀರೆಯನುಡುವ। ತೊಡೆವಸಿರಿಖಂ
ಡಮಜ್ಜನಭೋಜನಾದಿಕ್ರಿಯೆಗಳನುಳಿದು ತಮ್ಮಿತ್ರನೆಯರ॥ ತೊಡೆಕು
ತ್ತೆಕ್ಕೆಯನೊದ್ದು ನೂಂಕುತ್ತೇಳುತಬೀಳುತ। ತೊಡನೆಪಿಂದುಮುಂದು
ಗಾಣದೈತರುತಬಾ । ಮೃಡನರೂಪಂಕಂಡು ಮೂರ್ಛೆವಡೆದಕೆ
ಲಬರಂಗನೆಯರೇನೆಂಬೆನು॥೮॥ ತಳಿವಪಂನ್ನೀರ್ಗೆತಂಗೊಳಕೆಚಂ
ದನದಂಪಿ। ಗಲರಪಾಸಿಕೆಗೆಸುಳಿಗಾಳಿಗೊಡನೊಡನೆಕಂ । ಗೊಳಿಪ
ನಂದನಕೆಳಸುವಂತೆಕಾಮಂಗೆಕಾಮಿನಿಯರವ್ಮಾರುತೊಡನೆ॥ ತ
ಳರಿಪುರಿಯರವುನೆಯಬಾಗಿಲ್ಗೆಬಂದುಮುಂ । ದೊಳಪೊಗಲ್ಕಂಡುವಿ
ಷ್ವಕ್ಸೇನನೆಂಬವಂ । ನಿಲಿಸಲ್ತ್ರಿಶೂಲದಿಂದಿರಿದೆತ್ತಿದಂಹರಂಲೀಲಾ
ವಿನೋದದಿಂದಂ॥೯॥ ಅಟ್ಟರಿಯನೇನೆಂಬೆನಾತ್ರಿಶೂಲದಹತಿಗೆ । ಬೆ
ಟ್ಟವಾದಾರಪಾಲಂಕೂಡಗಹಗಬಿಸೆ। ಕೆಟ್ಟೆದೆಯನಹುದು ನೀನ್ನಗು
ವಕಾರಣಮದೇನೆಂದೀಶ್ವರನ್ನುಡಿಯಲು॥ ಉಟ್ಟರಿಪುದೇಂವೇದಮು
ರಸಿಕಾಣದನಿಂನ। ಸೃಷ್ಟಿವಾನಂದರೂಪಂಕಂಡನನೆಶಿವಂ। ಮೆಚ್ಚಿದೆ
ನೆನಲುಶೂಲದಿಂದಿಳುಪಬೇಡವೆನೆ ಹರನದಂಕೈಕೊಂಡನು॥೧೦॥ ಅ
ನಿತರೊಳಗೋರ್ವನಾಹರಿಯುದೆಗೆಪೋಗಿಬಳಿ। ಕನಿತವಸ್ಥೆಯನೆಲ್ಲ

ವಂಪೇಳೆಕೇಳ್ದುಭೋಂ। ಕನೆಸಿಂಹಪೀಠದಿಂದೆದ್ದೊಡನೆಪರಿತಂದುಶಿವ ನರೂಪಂಕಾಣುತ ॥ ಮನದೊಳುರೆಹಿಗ್ಗುತತಿದೂರದಿಂದವನಿಯೊ ಳು। ತನುವನೀಡಾಡಿಮುಗುಳೆದ್ದುಕಣ್ಣದಾಡಿತಂ। ನನೆಮುರವ್ರತ್ತೆಕ್ತ ರುತಭಕ್ತಿರಸದೊಳಗಾಳ್ದುತೇಳ್ದುತಾಹರಿಯೆಸೆದನು॥೧೧॥ ಜಯಜ ಯತುಜಗದೀಶಜನನಮರಣವಿನಾಶ । ಜಯಜಯತುನುತಕಾಯ ನಿತ್ಯನಿರ್ಜಿತಮಾಯ। ಜಯಜಯತುದಿವ್ಯಾಂಗಗೀಷ್ಪತಿಶಿರೋಭಂ ಗಜಯಜಯಕೃಪಾಪಾಂಗನೆ ॥ ಜಯಜಯತುಮುನಿಪಾಲವಾಙ್ಮಾ ಯಣೀಲೋಲ। ಜಯಜಯತುಭಾಳಾಕ್ಷಭಕ್ತರಕ್ಷಾಸಂಶಿಕ್ಷ। ಜಯಜ ಯತುಸದ್ಗ್ರೀವನಿಖಿಳಸುರಸಂಜೀವ ಜಯಜಯಂಎನುತಿರ್ದನು॥ ಇಂತುನಾನಾತೆರದಿನುತಿಸುತಿರ್ಪಾಹರಿಯ । ನಂತಭಕ್ತಿಯನೀಶ್ವ ರಂನೋಡಿಮೆಚ್ಚುತ। ತತ್ಯಂತಕರುಣದೊಳೆಂದನೆಲೆವಿಷ್ಣುಕೇಳ್ನಾ ವುಬಂದಭರವಂತಿಳಿಯದೆ॥ ಅಂತಿಂತುಪೊಗಳ್ವಫಲವೇನೆಂದುಮಾಚಿಸಿ ದ। ಕಂತುಮರ್ದನನವಚನಜ್ಯೋತಿಬೆಳಗೆಹರಿ। ಗಂತಸ್ತಮಂತೊ ಲಗಿಪೆರಮಸುಜ್ಞಾನವವತರಿಸಿತಾಕ್ಷಣದೊಳು ॥೧೩॥ ಅರಿದನಾ ವಿಧಿಶಿರಂಪರಿದೊಂದುತೆರನನಿದ। ಕೆರವೆನೆಂನೀನೊಸಲೊಳೊರೆವರ ಕ್ತಮನೆಂದು। ಸರಸುರನೆಚಕ್ರದಿಂಪೆರೆನೊಸಲ್ಗೊರೆದುಹರಕರಪಾತ್ರೆ ಸೆರೆಬಾಗಿಸೆ ॥ ದುರುದುರುಪಕೆನ್ನೀರತೊರೆಬಟ್ಟದಿಂದಿಳಿವ । ತೆರ ದೋಳ್ಕಪಾಲದಿಂಕರವೃತಿರಲದರಕೆಲ। ದೆರಪಿಂಗಬೊಮ್ಮಯುನ್ನೆರೆ ಯದಿರೆಹರಿಯಘಟುಬರತುದೇವಂಣಸುವೆನು ॥೧೪॥ ಸುರರಸೂಸಿರ ಬರಿಸಮುಂಬಿಡದೆಸುರಿಯುಲಾ। ಹರಿಯಸರ್ವಾಂಗರಕ್ತಂಮಜ್ಜಮಾಂ ಸಂಗ। ಳಿರದೆಪೋಗಲ್ಬಳಿಕ್ಕುಳಿದಚರ್ಮಾಸ್ತಿಯುಂತರಹರಿಸಿನಲಲಾ ರದೆ॥ ಹರಿಧರೆಗೆಬೀಳಲಾಗರನಂದುಕರುಣದಿಂ । ಹರಣಮಂಪಡೆ ಯೆಹೊಳೆಯುಂತೆಹರಿರಕ್ತಮುಂ। ಸುರಿವೃತಿರಲೀಶ್ವರಮನಂಭಕ್ತಚ ರಿತಕ್ಕೆಕರಗಿತ್ತದೇಂವೇಳ್ವೆನು॥೧೫॥ ಹೋಹೋಪುರೆಪುರೆಶಾಕುಸಾ ಕೈನಿನ್ನ। ಸಾಹಸದಭಕ್ತಿಗೆಮ್ಮಯುಮನಂಮೆಚ್ಚಿತಿಂ। ತೀಹಂಸವಾ ಹನನಹಮ್ಮಿನಿಂದೊಗೆದಕೋಪಂಶಾಂತಮಾದುದಿನ್ನು ॥ ಊಹಿಸ ಲ್ಕೆನಗೆಸರಿಭಕ್ತರುಂಟೇಯೆನು। ತ್ತಾಹರಿಯುನುದರಿಸಬೀಳ್ಕೊಟ್ಟ ಹರುಷದಿಂ। ದೀಹರಂದೇವೇಂದ್ರಪುರಕೆನಡೆತಂದನದನೇನೆಂದುಬಂ ಣಿಸುವೆನು॥೧೬॥ ಭೋಗಿಸಂಕುಲಶೋಭಿತಂಸರ್ವಮಾಂಗಲ್ಯ। ಯೋ ಗಿಭೂತಿಪ್ರಯುಕ್ತಂಕಾಮವಿರಹಣಂ। ಮೇಗೆವಿಭವಪದಂವಿಧೃತ ಗೋಪಂಸಮಾಶ್ರಿತಸೋಮನೆಂಬಪೆಸರಿಂ ॥ ಈಗಳೀಪುರವೆಮ್ಮಸ್ವಾ

ಮೊಂಕಿತೆಂಗಳೆದು|ರಾಗಮಂಮನಕೀವುತಿದೆನೋಳ್ಪವಿದನೆಂದು|
ನಾಗಭೂಷಂವಿಮಲ ವೇಷನಮರಾವತಿಯನೊಳ ಪೊಕ್ಕನುತ್ಸವ
ದೊಳು ||೧೭|| ಪೆಸರದಮರಾವತೀಪುರಮದಂನಯದೆಪಾ| ಲಿಸು
ವವಂದೇವೇಂದ್ರನವನಪೊರೆಯೊಳಗಿರ್ದ್ದ| ಬೆಸಕೈವರಮಲದಿಕ್ಪಾಲ
ರುಂಬುದೆಸುಧಾಹಾರಮಾತನಸತಿಯರೆ|| ಪೆಸರಾದಶಚಿರಂಭೆಯೂ
ರ್ವಸಿತಿಲೋತ್ತಮೆಯ | ರೆಸವಮೇನಕಿಸುಕೇಶಿಯರಿನಿಬರೊಸೆದು
ಪೂಜಿಸುವಿಷ್ಟಲಿಂಗಮೇವಿರೂಪಾಕ್ಷನೆನಲದರಪೆಂಪನೇಂವಣ್ಣಿಸು
ವೆನು||೧೮|| ಈವಿಭವದಿಂದೆಸವಪುರವನೊಳಪೊಕ್ಕಮ| ತ್ತಾವಿಕೃ
ತವೇಷಸರ್ವೇಶ್ವರಂಪಣ್ಯಾಂಗ| ನಾವೀಧಿಯೊಳ್ನಡೆದುಬರಲಲ್ಲಿಚರಿ
ಪಸಖಿಯರಚಲ್ಲೆಗಣ್ದುಂಬಿಗೆ || ಆವಿಭುವಿನಮುಳವದನಾಬ್ಜಮಿಂದಿರಾ
ಗಲದ| ನೇವೇಳ್ವೆನವರವರ್ತಂತಮ್ಮವರ್ಗುಸುರೆ| ಸಾವಧಾನದೊ
ಳೊಬ್ಬರೊಬ್ಬರಂಮುಂಚಿನಡೆದೊಡತಿಯರೊಳಿಂತೆಂದರು||೧೯|| ಅ
ಕ್ಕಕೇಳಾತನಾರೆಂದರಿಯೆವವನೋರ್ವ| ಚಿಕ್ಕಹರೆಯದಸೊಬಗನ
ದೆಪೋದಪೆಮ್ಮರೆಗೆ| ಮುಕ್ಕಣ್ಣನಪ್ಪನಲ್ಲದೆವಿಷ್ಣುಶಶಿಸೂರ್ಯಮನ
ಸಿಜರ್ಗಿನಿತುರೂಪು|| ಮಿಕ್ಕಿರದುನಿನ್ನಾಣೆಪುಸಿಯಲ್ಲಮಿಗೆಕೈಯೊ
ಳಿಕ್ಕಿದಾಭರಣಕ್ಕೆಕನ್ನಡಿಯೆನಿಂನೆದೆಗೆ | ತಕ್ಕವಂಶ್ರೀಭಾಗ್ಯಮಂ
ತಿಪ್ಪುದೋಯೆಂದುಕೂಡೆಮುತ್ತಿಂತೆಂದರು ||೨೦|| ಈಯಮರನಗರ
ಕ್ಕೈತರದಸುರನರನಾಗ | ನಾಯಕರ್ಮುಂನಿಲ್ಲವವರೊಳೀಪರಿಜಾ
ತಿ| ನಾಯಕನನೋರ್ವನಂಕಂಡುಬಿಲ್ಲವನೆಡದಕಾಯಕಾಬಲದಕ
ಡೆಯ|| ಕಾಯಮಣಿಯಲ್ಲದಿಂಪಡಿಯಿಡುವವಸ್ತುವಿಂ| ನೀಯಬು
ಜಭವಕೋಟಸೃಷ್ಟಿಯೊಳಗಿಲ್ಲಬರಿ | ಬಾಯಮಾತಲ್ಲನೋಳ್ಪೊಡೆ
ತೋರ್ಪೆನೆನಲವರುಸಂಭ್ರಮದಪೊರಮಟ್ಟರು ||೨೧|| ಸರಸಶಶಿವದ
ನೆಯರ್ಸಕಲಗುಣಸದನೆಯ | ರ್ಸರಸಿರುಹಪಾಣಿಯರ್ಸಾರಶುಕ
ವಾಣಿಯ | ರ್ಸರಳತರಳಾಕ್ಷಿಯರ್ಸತ್ಕಲಾಪೇಕ್ಷೆಯರ್ಸರ್ವಲಕ್ಷಣ
ಯುತೆಯರು || ಶರಧಿಗಂಭೀರೆಯರ್ಸಂಗೀತಸಾರೆಯರ್ಶರಣಜಿತ
ಭೋಗಿಯರ್ಸಂತತಂರಾಗಿಯ | ರ್ಸರಳ್ಪೈದರೆಡೆಯಾಗಿಸಂಭ್ರಮ
ದನಡೆಯಾಗಿಬರುತಿರ್ದರೇವೇಳ್ವೆನು || ೨೨ || ಪೀತ್ರಿದಳವಿಡಿದಂ
ತೆಮ್ಮೃಗಂಪಿಗಳಿಕುಲಂ| ಮೇಲೆತ್ತಿಬರೆಸೋಗೆಮುಡಿಗಸೋಲ್ತೊಡ
ನೆನವಿ | ಲೋಲಗಿಸಿಬರೆಕುಚದ್ವಯದಚಳ್ವಿಗೆಕೋಕ ಮಿಥುನಂಗ
ಳೊಡನೆಬರಲು || ಮೇಲೆನಡೆನುಡಿಗಂಚೆಗಿಳಿಗಳೊಡವರಲೊಂದು|
ನೀಲಾಬ್ಜಮಂಪಿಡಿದುಬರ್ಪಳೊಪ್ಪಿರ್ದಳೈ| ಗೋಲನದಿದೇವತೆಯೊ

ಪೇಳೆಂಬಿನಂ ಶಿವನನೀಕ್ಷಿಪೌತ್ಸುಕ್ಯದಿಂದಂ ‖೧೩‖ ಅರಮೆತ್ತಿದ್ದ ತಿಲಕವೇಕನಯನಾಂಚಲಂ । ಕರದ ಕನ್ನಡಿ ಕಟ್ಟದೊಳ್ಮಡಿವಿಭಾಗಿಸಿದ । ಕುರುಳಬೈತಲೆವೊಂದು ತೋಳೆಮರೊರವಕೆ ತಿಗುರದಗಂಧ ಮೊಟ್ಟದೊಡಲು ‖ ಅರೆವುಟ್ಟ ಸೀರೆ ನೆಲಕಲೆವ ಮೇಲುದು ಶಿರಂ। ಬೊರೆದ ಕಂಮೆಂಣೆನೀರಾರದ ಕುರುಳ್ಕಿರೆಯೆ। ಬರುತಿರ್ದರರೆಮಾಳ್ಪ ಸಿಂಗರಂಗಳನುಳಿದು ತರಳೆಯರ್ತವಕದಿಂದಂ ‖೧೪‖ ಕೆಂಪೆರಿರ್ದ್ದಂಣಕಡೆ ಪರೆದ ಕುರುಳಾಂತ। ನುಂಪುವಣೆಮಸುಳು ತಿಲಕಂ ಕದಡಿದಂಜನದ। ಸೊಂಪುಸೊಪ್ಪಾಗಿ ಬೆಳ್ಪಾದಧರಮುಗುರಿರಿತಮಿಡಿದ ನೆಲೆ ಮೊಲೆ ನಡೆಯೊಳು ‖ ಕಂಪಿಸುವ ತೊಡೆಗಳಾರಗ ಬೆಮರ್ನಿಟ್ಟಸುರಿ। ನಿಂಪೊಯ್ವ ತೆಳ್ವಳ್ಕೆ ಬಳಲು ಕೈನೆಯ್ಯ ಯಪೊಸ। ಗಂಪುಕೆದರಿದ ನಿರಿಯ ಸುರತಾಂತೆಯರ್ದ್ದೇವಕಾಂತೆಯರ್ಬರುತಿರ್ದರು ‖೧೫‖ ಎಂಣೆಗಂಟನಪೊರೆಗೆನುಣ್ಗೊರಳ್ಬಳ್ಕೆ ಕಡು । ತಿಂಣಮೊಲೆಗಳ ಬಿಣ್ಪುಗಸಿಯ ನಡುವಳ್ಕೆ ಪೊಂ। ಬಂಣಪೂರ ಮಾರಪೊಂಬಾಳೆದೊಡೆಗಳು ನಡುಗಿ ಗಡಡದಡಿಸೆಥಳಥಳಿಸುವ ‖ ಸುಂಣಮೆಯ ಶಶಿಮೊಗದಿ ಬೆಮರುವನಿಯುದಿಸಾಲ। ವಂಣೆಣೆಯ ತುಟಸುಯಿಲ ಬಿಸುಪಿನಿಂ ಬತ್ತಲಾ । ಹೆಂಣುವಿಂಡಂಗಡವಬಾಣದೇರಿಂ ನೋವುತಡಿಯಿಟ್ಟರಾಕ್ಷಣದೊಳು ।೧೬‖ ಮಗ್ಗುಲನೆಯನನುಳಿದು ಪೋಪುದುಚಿತಮಗಳೆ । ಸಗ್ಗವೆಗ್ಗೆಂಬಮಾತಗೆ ಕಾಯ್ದನಟಕೆಯಂ। ನೆಗ್ಗಿಪಿಂಬ ಪಾಪ್ಪಳಿಯಂ ಬಯ್ದುಮುಡಿಮೊಲೆಯ ಪೊರಮರ ಬಿಣ್ಪುನಿಂತು ‖ ವೆಗ್ಗಳಿಸಲೇಕೆಂದು ಬೊಮ್ಮನಂ ಜರೆವುತ್ತ। ಕಿಗ್ಗಡೆಯ ತೊಡೆಗಳಿಂ ನುಗ್ಗುಮಾಡುತ್ತುರ್ವ್ವಿ। ದಿಗ್ಗಜೋಪಮಯಾನಭರ್ಗನಂ ಕಾಣುತ್ತೆ ಬಗ್ಗಬರಿಯದೆಯಾದಳು ‖೧೭‖ ಒತ್ತಿಲಿಹವಲ್ಲಭನಮರವುತಾಡುವಪಗಡ। ಲೆತ್ತ ಚದುರಂಗಂಗಳಂ ಬಿಸುಟು ಪೋಡುತಿಹ। ಚಿತ್ತಜಾಗಮದೋಲೆಗಳನೊದ್ದು ನೂಂಕಿ ಮುಂಗೈಗಿಳಿಯನವನಿಗಿಟ್ಟು ‖ ಸುತ್ತಿಹ ಸಖಿಯರಂ ಕಣ್ಪುರ್ವ್ವುಗಳೊಳೆಡರ। ವುತ್ತೆ ಭರವಸದಿನಡವುತ್ತೆ ಬೆಮರುತ್ತೆ ಕಾ। ಣುತ್ತೆ ಶಿವನಂಗವನನಂಗನರಳಂಬಿಗೊರೆಯಾದರಖಿಳಸ್ತ್ರೀಯರು ‖೧೮‖ ತಡಬಡಿಪನಡೆಗಳಿಂ ತಬ್ಬಿಬ್ಬನುಡಿಗಳಿಂ। ಕಡುಬಿಸುಪಸುಯ್ಗಳಿಂ ಕಂಪಿಸುವಮೆಯ್ಗಳಿಂ । ಎಡವಕಂಬನಿಗಳಿಂ ಮಿಡುಕಟಹದನಿಗಳಿಂ ಮೀರುವಮನಂಗಳಿಂದಂ ‖ ಮುಡಿಬಿಟ್ಟಳಲ್ವಾರಿಂ ಮೃದುಮೊಗಬಳಲ್ವಾರಿಂ, ದೊಡಲುಗಳಮರವರಿಂ ದೋಪರಂತೆರವರಿಂ। ಮಡಲಿರಿದವಿರಹದಿಂ ಮತಿಗೆಟ್ಟಕರಹದಿಂದಬಲೆಯರ್ಕಂಗೆಸದರು ‖೧೯‖ ನೆಗವರೋಮಾಂಚಮುಣ್ಮವಬೆಮರ್ನಡು

ಗುವೈ । ಯೊಗುವಕಂಬನಿಬಿನ್ನದನಿವಿವರ್ಣವಸಾಂತ । ವೊಗೆಮು
ದರ್ಡೆಯಲೀಕ್ಷಿಸದೆ ಕಂಬಮಾದ ತನುಸಂಪೂರ್ಣಭಾವರತಿಯ ॥
ಸೊಗಸಿನೊಳಗೊಂದಿರ್ಪಚೇತನಮುಮೆಂಟುತಾ । ನೊಗುಮಿಗೆಯ
ಸಾತ್ವಿಕರಸಾವೇಶಮುಮತೆಯರೊ । ಳೊಗೆದವು ಸುಧೈರ್ಯ್ಯಮಂತೆಗ
ದವೆವರಂಕೊಲಲ್ಬಗೆದವೆಂಪೊಣೆಸುವೆನು ॥೨೦॥ ಬಿಡದೆನಿಟ್ಟಿಸುವ
ಕಂಡೊಡನೆಚಿಂತಿಸುವನ್ನೊಂ । ದಡಿಗಡಿಗೆಸುಯ್ವುದರಮಿಡಿದುತಾ
ಪಿಸುವಸೆಕೆ । ಗೂಡಲುರಿಕಳೆಲ್ಲಭಕ್ತಿಯನುಳಿವವಿಕಳಿಸುವನುಡಿ
ಯುಡಗಿಸುಮ್ಮನಿರ್ಪ ॥ ಕಡುಸೊರಗಿಮೂರ್ಛಿಸುವಸೊರಣೆಯಿಂದು
ಬಿದುಸು । ಮರ್ಡುಕುತಿಹಗಳಗತಪ್ರಾಣೆಯುಬಾರ್ಯ್ಗಳಂ । ಬಿಡು
ವಬಿಡುಗಂಗಳಸುಜಾಣೆಯುಗ್ವಲಿದಶಾವಸ್ಥೆಯೊಳ್ಕಂಗೆಸದರು ॥೨೧॥
ಸೋತನೋಲಿಕ್ಷಲೊಗಗುವಮುನಂತಳ್ಕಿಸುವ । ಪೀತಿಯಿಂತವಕಿಸಿ
ನಿಗುರ್ವತ್ತೋಳ್ಪಲೆಚುಂಬಿ । ಪಾತುರದೊಳೊರವಬಾಯ್ಪವಿಲಜ್ಜೆ
ನುಡಿಗೆಲವೆಲವಿಪನಾಲಿಗೆಕೂಟಕೆ ॥ ಕಾತರಿಸಿಮಿಡುಮಿಡುಕಲೊ
ಸರೊನಾಣೆಡೆನಿಂದರೀತಿಯಿಂಕಳೆಯುದೋಸರಿಪನಿರಿಯುಡಿಗಡಿಗೆ ।
ಧಾತುಗುಂದುವಧೈರ್ಯ್ಯಮುಸೆಯುಲಿಸದರು ಶಿವಬೆಂಕೊಂಡುಸುರಸು
ತಿಯರು ॥೨೨॥ ಹರಿಣಿಮಧುಕೇಶಿಯೂರ್ವಶಿತಿಲೋತ್ತಮೆರಂಭೆ । ವರ
ಮಂಜುಘೋಷೆಮೇನಕಿಸುರಸೆಮೊದಲಾದ । ಪರಿಗಣನೆಯಿಂಮೂ
ರುಲಕ್ಷಮೂವತ್ತಾರುಸಾವಿರಂಕಲಿಗೆಸಂದ ॥ ಸುರಸತಿಯರುಭವನನಂ
ಬೆ ಬತ್ತಿದರ್ಬಿಡದೆ । ಪರಮವೇದಾಂತಕಾಂತೆಯರಕ್ಕರಿಂದರಿಸಿ । ಪ
ರಿದೈದಲಾರದಪರಬ್ರಹ್ಮಮೂರ್ತಿಯಂಪೇಳಲೇನಚ್ಚರಿಯನು ॥೨೨॥
ಈತೆರದೊಳಾಸುರವರಾಂಗನೆಯರೆಲ್ಲರುಂ । ಕಾತರಿಸಿಬೆಂಬಿಡಿವು
ದಂಕಂಡುನಸುನಗುತೆ । ಸೋತವನತೆರದೊಳೋರಡಿಗೊಮ್ಮೆನಿಂ
ದುನೋಡುತತಿಸುಳಮಂತಿರುಪ್ರತ ॥ ಜಾತಿವಿಟಚಿನ್ಹಮಂಗದೊಳೆ
ಸೆಯೆನಟಣೆಗಳ । ರೀತಿಪೊಸತೆಸೆಯೆನಡೆನಡೆಗೆಸೊಗಸೆಸೆಯಲ್ಮ ।
ನೇತೆರದಮಾಯಾವಿಯೋಚೋದ್ಯಮೆನಲಭವನಡಿಯಿಟ್ಟುಬರುತಿ
ರ್ಪನು ॥೨೪॥ ನಗೆಯೊಳ್ಕೆಲಂಬರಂಸೋಲ್ವಂತೆನಿಲ್ವಕಾ । ಲ್ಟೆಗೆಯೊಳ್ಕೆ
ಲಂಬರಂವಿಟಮಾರ್ಗಮಂತೋರ್ಪ । ಬಗೆಯೊಳ್ಕೆಲಂಬರಂನೋಡಿನೊ
ಡದೆಬಿಡದೆನೋಡುತಿರುತಿರುಗಿನೋಳ್ಪ ॥ ಬಿಗಬಿನೊಳ್ಕೆಲಕೆಲಬರಂ
ಜಾಣ್ಮೆಗಾಡಿಗಳ । ತೆಗಬಿನೊಳ್ಕೆಲಕೆಲಬರಂಸೋಲವರಿದುಪ್ಪೈ । ನೆಗ
ಬಿನೋಳ್ಕೆಲಬರವಮ್ಮರುಳ್ಮಾಡುತೀಶ್ವರನಡೆಯಿಡುತಿರ್ಪನು ॥೨೫॥
ಉರಿವಬೇಸಗೆಯೊಳೂಣಗಿದಲತೆಗಳಂಸುಡುವ । ಮರುದಾಪ್ತನೊ

ಳ್ತುತ್ತುಪ್ಪವೊರದೆಸುರತನೂಡಿದೊಡೆ । ತರಹರಿಪ್ಪುದೇಮುನ್ನಮೊಳೆವ
ಳ್ಳಿನ್ಯವರ್ತನತನುವಿರಹದೊಳುರಿವರಂ॥ ಸರಸಸೌಂದರ್ಯರೂಪಮಂ
ನೋಡಿನಕ್ಕಮೊಗ । ದಿರುಹನಿಲ್ಲದೆಪೋಗುತಿರೆತರಳೆಯರ್ಕಂಡು
ತರಹರಿಪೆರೇಮೋಹದಿಂಧೈರ್ಯಮುಳಿದುಬಹು ದೈನ್ಯದಿಂದಿಂತೆಂದ
ರು ॥೩೬॥ ಪಿಂತಿರುಗಿನೋಡೆಲೋವಿಶಾಲಾಕ್ಷಮೋಹರಸ । ಮಂ
ತುಳ್ಕೆನುಡಿಸೋಸವಿನುಡಿಜಾಣತವಕದಿಂ। ದಂತಳ್ಕೆಗೆಯ್ಯೊಬದಿಕ್ಕೆ
ಯುತ್ತೋಳ್ಗಳಸಿರಿಕುರುಳ್ವಿಡಿವುತಧರಸುಧೆಯು॥ ನೀಂತಳುವದೀಂ
ಟೊಚಂದುಟಯುನೆಯುನೆಳೆಮೊಲೆಗ । ಳಂತಡವೃತೊತ್ತೊತಳಿಗೈರ್
ತಂಪಿಗನೆವಿರಹ॥ ಮಂತ್ರವಿಸಿನೆರೆಯೊಹದಗಾರನೀನೆಮ್ಮನೆಂದಮೊ
ರಿಯುರುಚಿಮೆಗೊಂಡರು ॥೩೭॥ ಕೂಡಲಾಗದೆಕೂಡಲೊಲ್ಲದೊಡೆ
ನಿಂದುಮಾ । ತಾಡಲಾಗದೆಮಾತನಾಡದೊಡೆಕೈಸನ್ನೆ । ಮಾಡ
ಲಾಗದೆಸನ್ನೆಮಾಡದೊಡೆ ಯುಕಟಕಟ ನಿನ್ನಕಂಣೋರೆಯಿಂದಂ॥
ನೋಡಲಾಗದೆನೋಡಲೊಲ್ಲದೊಡೆಮುಲ್ಲನೆಡ। ಯಾಡಲಾಗದೆಯಾ
ತರಾಸೆಯುಂಕೊಡನಾವ। ನಾಡನಿಷ್ಕರುಣಿಯೊಶಿವಶಿವಾಯೆಂದೋ
ರ್ವ್ವಸುದತಿಸಖಿಯೊಳುನುಡಿದಳು॥೩೮॥ ಉರಿಗಂಣನಿಂದಳಿದಸ್ಮರನೆ
ನ್ನಹೃದಯದೋ। ಳ್ಮರಳಿತಾಂಜನಿಸಿಮತ್ತೆನ್ನನೀಗಂಕೊಲ್ಲ। ಬರನ
ದಕ್ಕೀಶನನ್ನೀಹೃದಯದೊಳಗಿರಲ್ಮದನಭಯವಿಲ್ಲವೆಂದು॥ ಹರನತೆ
ನ್ನಕಣ್ಬಾಗಿಲಿಂಪುಗಿಸಯನಿಮಿಷತೆ । ಯುರವನುಳಿದಿಂತುಮೈಮರದ
ಳೊಯನಲೊರ್ವ್ವ । ತರುಣಿಚಿತ್ತದೋಳೀಶನನ್ನೆನೆದುಮೂರ್ಛೆ
ಯಿಂದಿರಲ್ದೇಂಚಲಾವುದುದೊ ॥೩೯॥ ಪೂಗಣೆಯುಹೋರಟೆಗೆತರ
ಹರಿಸದಬಲೆನೀ । ನೀಗಬಾನೀಶನಂ ಮುದಬಂದಹೃದಯಾಸು ।
ರಾಗವಿಂದೊಲಿಸಿರತಿಯಂಪಡೆವೆನೆಂದುನೀಕಣ್ಮುಚ್ಚಿಜಾನಿಸಿದೊಡೆ॥
ಈಗಸಭೆಯೊಳಗಪ್ಪುದೇಚಿತ್ತಶುದ್ಧಿಚ। ನ್ನಾಗಿಕಣ್ಗಳಸೌಖ್ಯಮಂ
ಪಡೆಯದಕಟಮರು । ಳಾಗದೀಸೊಬಗನಂಕನ್ದರೆದುನೋಡೆನು
ತಸಖಿಗೊರ್ವ್ವಳುನುಡಿದಳು ॥೪೦॥ ಮೇಲಕ್ಕಿದಪೆನಿಂತುಮು
ದ್ದಿಸುವೆನಿಂತುಮ । ತ್ತಾಲಿಂಗಿಸುವೆನಿಂತುಚುಂಬಿಸುವೆನಿಂತುಸಂ।
ಮೇಳಿಸುವೆನಿಂತುಪ್ರೋದಪೆನಿಂತುಬೈದಪೆಮ್ಮನಿಸಿದೊಡತಿಳುಪಿ
ರತಿಯು ॥ ಕಾಲವರಿದಿಂತುನೆರದಪೆನವನೊಳೆಂದೋರ್ವ್ವ । ಬಾಲೆ
ಭಾವಿಸುತಬರುತಿರೆಭಾವರತಿಮೂರ್ಛೆ । ಏಳಿಗೆಯೊಳವಳೊಪ್ಪಿ
ದಳುಚಂದ್ರನುದಯದಿಂಧೂಪಲದಪತುಮೆಯಂತೆ ॥೪೧॥ ಚಿತ್ತರಿ
ಪಡರಿದೆನಲ್ಕಲಕಲರ್ತಂತಮ್ಮ । ಚಿತ್ತದೊಳಗೀಶನಂನೆರದರರೆಬ

ಮೂರ್ಛೆ। ಪೆತ್ತುಮನಸಿನೊಳ್ಳೈದೆ ಕೂಡಿದರ್ಕೆಲಕೆಲರ್ನ್ನೋಡಿ ಸುಖಮಂಪಡೆದರು ॥ ಮತ್ತೆ ಕೆಲಕೆಲರಂತು ಮಿಂತು ದಣಿಯದೆಸಾವ । ಹೊತ್ತ ಸರಿಯದೆಶಿವನಚಿತ್ತವರಿಯದೆಹಿಂದೆ। ಸುತ್ತಿ ನೆರೆಯದೆ ಬಾಯಿ ಬತ್ತಿ ಬರವೆದೆಯಾಗಿ ಬಳಲ್ದರದೇನೆಂಬೆನು ॥೪೨॥ ಕಡುಬಿಸಿಲಮುರಿವಕ್ಕಿಯಂತೆಗಂಟಿಕ್ಕಿ ಡುಕಿ। ಯಡೆವಿಗ್ಗಿಪ್ಪಿಟ್ಟಿದೆಳೆಹುಲ್ಲೆಯಂತೆದೆದಡಂ । ದಡಸಿಹವ್ವನೆಹಾರಿದಾವಿಯೊಳು ಪೊಕ್ಕುರಗಿಯಂತೆ ಬಿದಬಿದನೆಬೆಂದು॥ ಮಡುವಿನಿಂ ಪೊರಗಿಟ್ಟ ಮುರಿವಿಾನಿನಂತೆಕೆಲ। ಸಿಡಿಸಿಡಿದು ಪೊರಳ್ವಿರಹದಬೆಂಕಿಯಿಂ ಬೆಂದು । ಕಡುಬರವಶಂಬೋದರಮುರಿಯನರ್ಡವಲ್ಲನಿಂತಲ್ಲಿ ತಕ್ಷಣದೊಳು ॥೪೩॥ ಪರಿದು ಬಿಸುಟಿಳಿವಳ್ಳಿಯಂತೆ ಸವೆಮ್ಮೈಗಳಿಂ । ಮುರಿದಿಟ್ಟ ತಾವರೆಗಳಂತೆ ಸವಕ್ಕೈಗಳಿಂ। ತರಿದನೈದಿಲಪೂಗಳಂತೆ ಸವಕಣ್ಗಳಿಂ ಮಿಡುಕುತಿಹಗೋಣ್ಗಳಿಂದಂ॥ ನೆರೆಪಗಲಚಂದ್ರನಂ ತೊಪ್ಪುವಮೊಗಂಗಳಿಂ । ತಿರಿದಚಂದಳಿರಂತೆಯೊಪ್ಪುವಧರಂಗಳಿಂ । ಮರೆದಿಪ್ಪಮನದಚೇತನದಸುರವನಿತೆಯರ್ಕಂಗೆಸದರೇನೆಂಬೆನು ॥೪೪॥ ಈಸಗ್ಗದಬಲೆಯರಸಂಭೋಗಕೆಳಸಿನಾ। ನಾಸಮುದ್ರಾಂತಚಕ್ರೇಶ್ವರರು ಬಹುಜನ್ಮ। ದಾಸುಕೃತಮೊದವಲಿಸಗಿದಯಜ್ಞಮುಖದೊಳ್ಳೈತಂದಿವರಪದವಿಡಿದಿಹ॥ ದಾಸಿಯರೊಳೊಂದಿವಸಮಿಪ್ಪುದಘಟಿತಮಪ್ಪ। ದೇಸೊಬಗನೋರೂಪಮಾತ್ರದಿಂರಂಭಾದಿ । ಭೂಸುರಸ್ತ್ರೀಯರಂನಾಣ್ಗೆಡಿಪನಿವನೆಂದು ಪುರಜನಂ ಬೆರಗಾದುದು ॥೪೫॥ ಕಂಡನೀಪರಿಮರುಗುತಿರ್ಪಕಮಲಾಕ್ಷಿಯರ। ತಂಡಮನಕಟಸಕಲಪರಣಿಗಳಿಗಾಕಾಮ। ಸಂಡಲೆವಿಶೇಷಮುಲ್ಲಾಯೆಂದು ಕರುಣರಸಪೂರ್ಣದೃಷ್ಟಿಯೊಳೀಕ್ಷಿಸೆ॥ ಖಂಡಿಸಿತು ವಿರಹಮುದೆಗಾಯ್ತು ಸವಿರತಿಸುಖಮು। ನುಂಡಬಲೆಯರ್ತಮ್ಮಮನೆಗಳ್ಗೆ ಪೋಗಲಾ । ಖಂಡಲನಗೃಹಕೆ ನಡೆತರುತಿರ್ದನಭವನತಿಲೀಲಾವಿಲಾಸದಿಂದಂ॥೪೬॥ ಇಂತೆಸವ ಚೆನ್ನಬಸವೇಶ್ವರಪುರಾಣಮಂ। ಸಂತಸವಿಬರದವಗೋದಿದರ್ಗರ್ಥಮಾ। ದ್ಯಂತಮಂ ಬಿಡದೆಪೇಳ್ದರ್ಗೆ ಪಠಿಸಿದವರ್ಗೆಭಕ್ತಿಯಿಂ ಕೇಳ್ದವರ್ಗೆ॥ ಸಂತತಂ ಸಕಲಸುಖಮಂ ಸಕಲಭೋಗಮುಮ। ನಂತಸೌಭಾಗ್ಯಮಂ ಕೊಟ್ಟುರಕ್ಷಿಸುವನಾ । ಕಂತುಹರನಪರಾವತಾರನೆನಿಸುವಚನ್ನಬಸವೇಶನಳ್ಕರಿಂದಂ ॥೪೭॥

ಎರಡನೆಯಕಾಂಡದಲ್ಲಿ೮ನೇ ಸಂಧಿಮುಗಿಯಿತು

## ೯ನೇ ಸಂಧಿ

ಸೂಚನೆ॥ ಇಂದ್ರಮೊದಲಾದದಿಕ್ಪಾಲಕರಮನೆಗೊಲ್ದು। ಚಂ

ದ್ರಧರನೈದೆಭಿಕ್ಷವುನಾಂತುಬಳಿಕಾವು । ನೀಂದ್ರಗೆ ಶಿವ
ನೊಲ್ದುದಕ್ಷಿಣಾಮೂರ್ತಿಯಾಕಾರದಿಂಬೋಧಿಸಿದನು

ಪದ॥ ಕರಧೃತಕಪಾಲವಿನಮಿತಲೋಕಪಾಲಭೀ। ಕರದೈತ್ಯ ವುಥನವಿಶ್ರುತವಿಮಲಕಥನಹಿವು। ಕರಕಲಾಜೂಟಭೂಷಿತಕಾಲಕೂಟಾಂಧಕಾಸುರನಿಶಾಟವಿಜಯ॥ ಸಗುಣಧಾಮಸನ್ನುತಸತಪ್ರೇಮಕಾ। ಸರನಾಶದಹನಪ್ರಾಶರಸಂಗದಹನಕರ। ಶರಣಜನರಕ್ಷಪಂಪಾವಿರೂಪಾಕ್ಷಲೋಕಾಧ್ಯಕ್ಷಸಲಹೆಂಮನು॥೧॥ ಪೊಸತಿದೆಲಚನ್ನಬಸವೇಶಶೂಲಿಯಕೈಯ । ತಿಸುಳೆವೆಣನಂಕರಕಪಾಲವುಂಕಂಡೋರ್ವ ಶಶಿಮುಖಿಯುಳಾದೊಡಂಭಯಬಿಭತ್ಸಗೆಸಂದುದಿಲ್ಲವೆನೆಶಿವಮುಖದೊಳು ॥ ಬೆಸುಗೆಗಣ್ಗಳ್ವರತುಗಾಣ್ಬವೇಮೋಹ್ಕ್ಕ। ರಸವುನಿತ್ತಾದೊಡಂವೋಹರಸಮಂತೆಗು। ಳ್ಳಸಬಲ್ಲವೇಕಾಮಿಗಳ್ಕಂಣುಗಾಣರೆಂಬುದುಪುಸಿಯೆಕೇಳೆಂದನು॥೨॥ ಪೊಕ್ಕನೀಶಂಸುರೇಂದ್ರನಮನೆಯಬಾಗಿಲೋ। ಳ್ಕಿಕ್ಕಿರಿದಸುರಭಟತಸಂದಣೆಗಳೇನುವಂ। ಲಕ್ಕಿಸದೆಶೂಲವುಂನೆಗಪಿಬ್ರಹ್ಮನಕಪಾಲವನುದಕೆತ್ತಿಕೊಡೆ॥ ಎಕ್ಕಕ್ಕಯಿಂದವುತ್ಯುಚ್ಚಸ್ವರಂಗಳಿಂ। ಮುಕ್ಕಂಣನೊದುಭಿಕ್ಷಾಭಿಕ್ಷವೆನಲಿಂದ್ರ। ನುಕ್ಕವತಿಹರುಷದಿಂದಾ ಸಿಸಿದನಾಗಳೆಭವನಸು ಭಿಕ್ಷಧ್ವನಿಯನು॥೩॥ ಕೇಳ್ದಂಗಭೀರಭಿಕ್ಷಾಧ್ವನಿಯನಂಗಗೊ ಳಾತ್ತಳ್ದಂಪುಳಕಜಲವುನಾನಂದವಾರ್ಧಿಯೊಳೆ । ಗಾಳ್ಪಮ್ಮನಕ್ಕಸರಿಯಾವಾಪ್ತರೊಳುಮುನಿಗಳೊಳುಶಚೀದೇವಿಯೊಳಗೆ॥ ಪೇಳ್ದಂಮಹೇಶನಬರವುಚೋದ್ಯಮೆಂದುಸುರ। ರಾಳ್ದಂಮ್ಯಗೇಂದ್ರಪೀಠವನುಳಿದುನಡೆತಂದು। ಬೀಳ್ದಂಮಹಾದೇವನಿಟಿರೊಳಪ್ಪಾಂಗಬಂಧಯಭರಿತಭಕ್ತಿಯಿಂದಂ॥೪॥ ಕಾರವೊಳಗಂಕೇಳ್ದನವಿಲಂತನಲಿದುಶಶಿ । ಸೂರರುದಯಂಗಂಡಕುಮುದಕಮಲಂಗಳೆಂ। ತೋರಣದಿಪೆಂಪಿಗುರುವೆಂಕಂಡಶಿಷ್ಯನಂತಧಿಕಭಕ್ತಿಯನೆತಾಳ್ದಿ ॥ ಬಾರದಗರ್ಭಂಗಂಡಕವಿಯಂತೆಮೆಚ್ಚಿಕಂ। ಣೂರಿನಿಧಿಯಂಕಂಡಬಡವನಂತುಬ್ಬಿತ। ನ್ಮಾರಹರಮುಖಕಮಲವಂದೂರದಿಂಕಾಣುತಮರೇಂದ್ರನಿಂತೆಂದನು ॥೫॥ ಫಲಿತವಾದುದುಪೂರ್ವಸುಕೃತಲತೆಪರಿತಂದು। ದೊಲವಿನಿಂದಮೃತಪ್ರವಾಹವುತ್ರತ್ಪವಂ। ದಳೆದುಬಂದುದುಪರಬ್ರಹ್ಮವಾನಂದವಾರಾಸಿತಾಂಗುಡಿಯುಟ್ಟದು॥ ಸಲೆಸೌಖ್ಯಮೋರೂಪನಾಂತುನಡೆತಂದುದುಜ್ವಳಮೂರ್ತಿಯೋಮೂರ್ತಿವೆತ್ತುಸಾರ್ದಂತೆನ್ನ। ಪೆಲವುಜನ್ಮಂಸಫಲವಾದುದೆಂದಮರೇಂದ್ರನಭವನನ್ನುತಿಯಿಸಿದನು ॥೬॥ ಕೆ

ರಣ್ಯನುತಶಶಿಚೂಡಸಕಲದುರಿತವಿಭಾಡ। ಶರಣುಸೌಖ್ಯಪ್ರಾಜ್ಞ
ಸರ್ಪವೇಷ್ಟಿತಕರ್ಣ। ಶರಣುಸರ್ವಾರ್ಘಭೋಗ್ಯಸಚ್ಚರಿತಯುತಹೃದ್ಯ
ಶರಣುಸಲ್ಲಲಿತಶೀಲ॥ ಶರಣುಸಜ್ಜನಪಾಲಸಾಮಗಾನವಿಲೋಲ। ಶರ
ಣುಮುನಿಜನಸಂಗಮುಕ್ತ್ಯಂಗನಾಲಿಂಗ। ಶರಣುಹರಿನತಚರಣಹ
ಸ್ತಿಚರ್ಮಾಂಬರಣಶರಣೆನುತ್ತಡಗೆಡೆದನು॥೭॥ ಮಾಣದಿಂತಡಿಗೆರಗಿದಿಂ
ದ್ರಸೇನನಮಿಸಿದಿಂ। ದ್ರಾಣಿಯುಮನೀಶ್ವರಂನಗೆಪಲೊಡನಾಕಾಶ
ವಾಣಿನುಡಿದಿತ್ತೆಲೇಸುರಪಕೇಳ್ಪುರವೋಶನೆಡದ ಹಸ್ತದೊಳೊಪ್ಪು
ವ॥ ವಾಣೀಪತಿಯಕಪಾಲಕ್ಕೆಭಿಕ್ಷವನಿನ್ನೆ। ತ್ರಾಣಮುಳ್ಳನಿತುಮಂ
ನ್ನೀಡೆಂಬವಚನವಂ। ಪ್ರಾಣವೃತಂದಂತೆಕೇಳ್ದೊಡನೆತರಿಸಿದಂ
ನಾನಾಸುವಸ್ತುಗಳನು॥೮॥ ಎಣಿಕೆಯಿಲ್ಲದವಸ್ತುವಂತರಿಸಿಶಚಿವೊ
ಡನೆ। ಫಣಿಭೂಷಣನಕರಕಪಾಲಕ್ಕೆಭಿಕ್ಷವಂ। ದಣಿಯದೆಡೆಮಾಡೆನ
ಲ್ಕನು ಮಾದಳೈವತ್ತುಲಕ್ಕಸುರಸತಿಯರೊಡನೆ॥ ಮಣಿಖಚಿತಹೊ
ನ್ನಹರಿವಾಣಂಗಳಿಂತುಂಬಿ। ಮಣಿಮಣಿದುನೀಡಲ್ಕೆತುಂಬದಿರೆಸು
ರಪಸುರ। ಮಣಿಯುಂಸುಧಾಕಳಶವನ್ನೀಡಬರಲಭವನೊಲಿದಾಗ
ಳಿಂತೆಂದನು॥೯॥ ಸಾಕುಸಾಕ್ಸುರಪಕೇಳ್ಸುಧಾಕಳಶವಿದು। ನಾಕಿ
ಗರಜೀವದಾಧಾರಮಿದನತ್ಯಂತ। ಜೋಕೆಯಿಂಬೈಚಿಡುವುದೆನು
ತವರಬೀಳ್ಕೊಡುತ್ತನಲಪುರಕೈದಲಗ್ನಿ॥ ಆಕಪರ್ದಿಯಕರಕಪಾ
ಲಕ್ಕೆಭಿಕ್ಷವಂ। ಬೇಕಾದರತ್ನಂಗಳಿಂಬಡಿಸಲದರಿಂದ। ನೇಕಹರು
ಷದಿಯುಮನಪುರಕೆಬಂದಾಜವನಪೂಜೆಯಂಕೈಕೊಂಡನು॥೧೦॥ ಎ
ಲಸಿದ್ಧರಾಮಕೇಳಾಯಮನಪಟ್ಟಣದಿ। ಪುಳುಗೊಂಡವಾದಿಯುಗಣಿ
ತಕೋಟಿಯಗರೊಳಗೆ। ತಿಳಿಯಲೆಪ್ಪತ್ತೆಂಟುಕೋಟಿನಾಯಕನರ
ಕಮನಿತುಕುಂಡಂಗಳಲ್ಲಿ॥ ಮುಳಿಗಿರ್ದನರಕಿಗಳಭವಬಂಧಮಾತ್ರ
ಟಂ। ಸಲಶೈವಲೋಕಸಂಪ್ರಾಪ್ತರಾದರ್ಶಿವನ। ನೊಲವಿನಿಂಹೃತ್ಕ
ಮಲಕರ್ಣಿಕೆಯೊಳಿಂಬಿಟ್ಟರಂಪೊಗಳಲರಿದೆಂದನು॥೧೧॥ ಹರುಷದಿಂ
ಕಾಲನಂಬೀಳ್ಕೊಂಡುನೈರುತ್ಯ। ವರುಣವಾಯುಕುಬೇರರೀಶಾ
ನ್ಯರೆಂದೆಂಬ। ವರಪುರಂಗಳ್ಗೆಕಮದೊಳ್ಪುರಲ್ಕವರಿದಿಗೊಂಡಧಿಕಭ
ಕ್ತಿಯಿಂದಂ॥ ತರಣಿಯುರ್ವರಸುನವರತ್ನಂಗಳಿಂಶಿವನ। ಕರದಪಾ
ತ್ರೆಗೆಭಿಕ್ಷವಂನೀಡಲವರುಗಳ। ಕರೆದುಸಂತೈಸಿಬೀಳ್ಕೊಂಡುಶಂಕ
ರಸಂದುಬರುತಿರ್ದನೇವೇಳ್ವೆನು॥೧೨॥ ಸಕಲಜಗಮಂಪಾವನಂಮಾ
ಡಿನಾಮಗೋ। ಪ್ಯಕಭೂಮಿಯಂಪುಣ್ಯಭೂಮಿಯೆಂದೆನಿಸಿನಿ। ಷ್ಪ್ರ
ಕಟಗಿರಿಗಳೆಂದೆನಿಸಿಪೇರ್ವಡೆಯದಿಹನದನದಿಗಳ॥ ಅಕಳಂಕಪುಣ್ಯ

ನದಿಯೆನಿಸುತಿಲ್ಲಲ್ಲಿ ಬಾ। ಧಿಕವನಂಗಳೆಸೆವ ಪುಣ್ಯಾವನವೆನಿಸಿರ್ದ।
ಪರ್ಣಕಹರಂಬಿಮಶ್ಶೈಲವಿದ್ದೆಡೆಗೆ ನಲವಿನಿಂದಾಗ ನಡೆತರುತಿರ್ದನು॥
ಆಗಿರಿನಿತಂಬದೊಳ್ಳಾದ್ರುಮವನಮಿರಲದರೊ। ಳಾಂಗೌತಮಂ ಭೃಗು
ಭರದ್ವಾಜನತ್ರಿಮ। ತ್ತಾಗಾಲವಂ ವಸಿಷ್ಠಂ ಕೌಶಿಕಂ ಕಶ್ಯಪಂ ವ್ಯಾಸ
ನಂಗೀರಸಂ॥ ಬಾಗುರಿ ಪರಾಶರಂ ಗಾರ್ಗ್ಯ ಕಣ್ವಮುಖ್ಯ। ರಾಗಿರ್ದ
ವರಮುನಿಗಳಗಣಿತರ್ತಮತಮ್ಮ। ಯೋಗನಿಷ್ಠೆಯೊಳೀಶ್ವರಧ್ಯಾ
ನದಿವ್ಯಮಂಗೊಳಿಸಿರ್ದರೇನೆಂಬೆನು॥೧೪॥ ನೆಳಲಂತೆ ಪ್ರವಳಿಗೆಸಂ
ದಮುತಿಯಂತೆನಿ। ಮರ್ಗಳಕವರ್ಗಕನುಸಾರಿಯಾಗಿನುಂಗಿದರಸಂ।
ಸಲಿತ್ರಿವಿದಬಳಿಗೊದಗುವಂತೆ ನೆಗಹಿಗೆಮುಂಚೆಶುಶ್ರೂಷೆಗಳಮಾಡು
ವ। ತಳಿರುಕ್ಕೈತೆಳ್ವಿಸುರಸುಳಿಗುರುಳನೆಳೆನಡುವಿ। ನೆಳೆಜಪ್ಪನದ
ಮುದ್ದುಮೊಗದಕೋಮಲಾಕಾಯ। ದಲಘುಜಘನದಮಹಾಪಾತಿವ್ರ
ತಾಜನಂಕಂಗೊಳಿಸಿತೇನೆಂಬೆನು॥೧೫॥ ಆಮುನಿಗಳಾಶ್ರಮವನೊ
ಳಪೊಗುತ್ತೀಶ್ವರಂ। ಕೋಮಲಾಂಗಂ ಘಳತ್ಥಳಿಸೆಹೊಳಹೊಳೆವಸ್ವಾ।
ದಾಮಿನಿಜಸಾರೂಪ್ಯಮಂಪಡೆಯೆ ಕಣ್ಮ್ರಗಂ ನಡೆನಡೆಗೆಗಾಡಿಮಿ
ಗಲು॥ ಆಮಹಾಶೇಷನೀತನರೂಪಮಂಪೊಗಳೆ। ಸಾಮರ್ಥನಲ್ಲಿಂ
ಬಸಂಶಯಂಮುನಿಜನ। ಸ್ತೋಮಕ್ಕೆ ಪುಟ್ಟೆ ಭಿಕ್ಷಾಧ್ವನಿಯುಮು
ಣ್ಮೆ ಕಡುಚೆಲ್ವಿನಿಂ ನಡೆತಂದನು॥೧೬॥ ಆರುಷಿಸ್ತ್ರೀಯರುಂ ಮನೆಗ
ಳೊಳುತಮ್ಮ ಸಂ। ಸಾರಕೃತ್ಯಂಗಳಿಂದಿರುತಿರ್ಪ್ಪಶಿವನಗಂ। ಭೀರಭಿ
ಕ್ಷಾಧ್ವನಿಯುಮಂಕೇಳ್ದು ಸುಪವಿತ್ರಪಾತ್ರೆಯೊಳು ದಿವ್ಯಾನ್ನಮಂ॥
ನಾರಪಾಯಸವನನಿತುಂಬಡಿಸೆತಂದು ಕೈ। ಯಾರೆಭಿಕ್ಷಮನೀಡಿ
ಮುಖವನೀಕ್ಷಿಸದೆಕಂ। ಣ್ಣೋರೆಯಿಂ ಪ್ರತಿಕೃತಿಯುಗುರ್ವಳಗಿನೊ
ಳ್ಕಂಡು ಮೋಹಿಸಿದರಾಕ್ಷಣದೊಳು॥೧೭॥ ಆವಚನ್ನಿಗನೀತನಾವ
ನೀಜಾಣನಿವ। ನಾವನೀಗಾಡಿಕಾರಂ ಶಿವಾಯೆಂದತ್ತೆ। ಮಾವಮೈ
ದುನಭಾವಗಂಡರಿರೆಮನೆಗಳಂ ಬಿಟ್ಟಳುವಮಕ್ಕಳುಗಳಂ॥ ಓವದೆ
ಮುನೀಂದ್ರಹೋಮಾದ್ಯ ಚರುಸಮಿಧೆಗಳ। ತೇವಗಂಧಾಕ್ಷತೆಗಳಂ
ಬಿಸುಟು ಸರಿತಂದು। ದೇವೇಳ್ವನಬ್ದ್ಷಕ್ಷಿಯಮರ್ದನಲಕ್ಷ್ಮಿಯರ್ನಿ
ಟ್ಟಿಸಿದರೀಶನಿರವಂ॥೧೮॥ ಕಾಣುತೀಶನಮೂರ್ತಿಯುಮ್ಮಹಾಸತಿ
ಯರೆದೆ। ತಾಣನೆಲಗಾಣಮಾಧವುವಲರ್ಗಣೆಗೆಮನ। ಮಾಣದಟಗಡಿ
ಗೆಬೆಂಬತ್ತಿದವು ಬತ್ತಿದವು ಬಾಯ್ಗಳತಿತವಕದಿಂದಂ॥ ತ್ರಾಣಮೆಳ್ದಾ
ಯ್ತು ಮತ್ತೊಡನೊಡನೊಸರ್ವನಾ। ಣ್ದಾಣಮುಬ್ಬರಮಾಯ್ತು ನಡು
ಗೆತಡಬಡನಾಯ್ತು ಮಾಣತಬ್ಬಿಬ್ಬಾಯ್ತು ಸುಮತಮ್ಮರುಳಾಯ್ತೊಂ

ದುನಿಮಿಷದೊಳಗೇನೆಂಬೆನು॥೧೯॥ ಸ್ನಾನಜಪಹೋಮಮಧ್ಯಾಪ
ನತಪಸ್ಸಿಸುಯಿ। ಧಾನಯುಕ್ತಾತ್ಮಪತಿಗಳೆಜನ್ಮಜಾಡ್ಯದೋ। ಳಾತ್ತ
ನಡ್ಡಗಟ್ಟ್ವಡೆದಾಕಾವಗಟ್ಟ್ರಪುರವೈರಿಯಿರಾಕ್ಷಣಘಾತಕೆ॥ ಆನದೊಡ
ದೊಸರಿಪರಿವ್ರೋಳ್ಕ್ವಮರ್ತ್ವನಿಗಳೆಂ। ದಾನನಾಬ್ಜಂಗಳೊಳುಹರುಷಾಶ್ರು
ಕಂಗಳೊಳು। ಮಾನಿತವರಾಂಗದೊಳುತೆಳ್ವದಂಸೂಸೆಮೋಹಿಸಿದರ
ಖಿಳಸ್ತ್ರೀಯರು॥೨೦॥ ಸಾಜಗುಣಮಲ್ಲದರಿಯದಮುಗ್ಧೆಯುರ್ಬ್ಬಳಿ। ಕ್ಕೀ
ಜಟ್ಟಿಗಾರನಂಕಂಡುಮರುಳಪ್ಪುದಿದು। ನೋಜಗಮೆಶಿವಶಿವಾತರಳೆ
ಯಬೆಂಕಿಯೊತ್ತಿನಬೆಣ್ಣೆಯಂತೆಕರಗಿ॥ ಸೂಜಿಕಲ್ಲಿದಿರಕಾರ್ಬೊನ್ನಂ
ತೆತ್ತಿರುಗಿದೆಡೆ। ಗಾಜವದೊಳೆಡತಿರುಗಿಬೆಂಡಾಗಿನಾರೀಸ। ಪಾಜವ
ಸದುದುಸೂತ್ರಧಾರಿವಿಡಿದಾಡಿಸುವಬೊಂಬೆಗಳಬಳಗದಂತೆ॥೨೧॥
ಅಚ್ಚರಿಯನಾಲಿಸೆಲರಾಮಮುನಿಜನಕೆಬಿತ್ರ। ಪೆಚ್ಚಬೇಕೆಂಬೀಶ್ವ
ರಂವಿನೋದಕ್ಕೆಕ। ಣ್ಮುಚ್ಚಿಜಾನಿಸುವಸತಿಯುರಕರಸ್ಪರ್ಶನಂಗೆಯ್ಯ
ಲೊಡನಾಕ್ಷಣದೊಳು॥ ಅಚ್ಚರದಶಿವನಸಾರೂಪ್ಯದಿಂಧಳಧಳಿಸು।
ವಚ್ಚಮುತ್ತಿನಬೊಂಬೆಯೆಂತಿಪ್ಪಶಿಶುಗಳಳು। ತುಚ್ಚಿಬಸುರಿಂಬಿದ್ದ
ವೀಶ್ವರಮಹಾತ್ಮೆಯಂಬಣ್ಣಿಸುವರಾರೆಂದನು॥೨೨॥ ನೆರದುವಲ್ಲಿರ್ದ
ಪಟುವಟುಸಂಚಯಂತಮ್ಮ। ಗುರುಗಳೊಡನೀವಾರ್ತೆಯಂಪೇಳ
ಬೇಕೆಂದು। ಪರಿದುಬಂದಷ್ಟಬಿದ್ದೊಡನೆದ್ದುಕೈಗಳಂಮುಗಿದುತಮ
ತಮಗೆನಿಂದು॥ ಉರಿನವಿಸ್ನಮ್ಮಯತಪೋಜಪಧ್ಯಾನಂಗ। ಳಿಗ
ವದೇಂಭಾನಸಮದೋರ್ವಮಾಯಾವಿನಿಂ। ಮರಸಿಯುರನೊಲಿಸಿ
ಕೊಂಡೊಯ್ದುಪಂಬಿಡಿಸಿಕೊಳ್ಳೀಳೆಂದೊರಲ್ದರಂದು॥೨೩॥ ಕೇಳಿಕ
ಣ್ದೆರದುಜಪಮಂಜರೆದುಕೋಪಮಂ। ತಾಳಿತಪಮಂತೊರೆದುಪೊ
ನಮಂಮರೆದುನೆರೆ। ಬೇಳ್ವುತಿಪಾರ್ಣಾತಿಯನಿಟ್ಟುಷಟ್ಕರ್ಮಮಂ
ಬಿಟ್ಟುನೆರೆಬೆರದುಪಟ್ಟು॥ ಕಾಳಕೂಟಕ್ಕೆಳಸಿದವರಾಮರ್ಹಾರು
ದ್ರ। ಭಾಳಲೋಚನದಕೆಟ್ಟಂತಾವರಾರೆಂದು। ಘೂಳಿಡಲ್ಕೆಸೆಗಳಾ
ರ್ಭಟಿಸುತೆದ್ದುಗುಮಹಾಮುನಿಗಣವನೇನೆಂಬೆನು॥೨೪॥ ತೊರು
ತೋರಾವೆಡೆಯೊಳಿಪ್ಪನಿಂಪಿನಜಟ್ಟಿ। ಕಾರನವನಂಕರೆವಿಚಾರಿಸು
ವವೀಪರಿಯು। ದೂರನೆಂದೋರ್ವಸಿಂಹೋಗ್ರನೆಂದೆಂಬವಟುವಂಕ
ರೆದುನೇಮವೀಯು॥ ತೋರಗಂಗಳ್ಕಿಡಿಗಳಂಸೂಸೆವೈಬೆಮ। ರ್ತ್ರೀ
ರೆಬೇಗದೊಳೀಶನೆಡೆಗೆಬಂದೆಲೆಮಾಯು। ಕಾರನಿನ್ನಮ್ಮಹಾಋಷಿ
ಗಳೊಡಗೊಂಡುಬರವೇಳ್ದರೆನಲಿಂತೆಂದನು॥೨೫॥ ಒಸಗೆಯಿಂಋ
ಷಿಗಳೆಮ್ಮಂಕರೆಯೆಬರಲದೇಂ। ಬೆಸನವೇನೆಲೊಭಿಕ್ಷವಿಲ್ಲಬವರೆಡೆ

ಗೆಬಹ | ಘಸಣೆಯೆಂಬಂದಂತೆನಿನ್ನಡೆ ಯೆನಲ್ಕೆ ಸಿಂಹೋಗ್ರನತಿ
ಕೋಪದಿಂದಂ॥ ಮಸಗಿದಮೃಗೇಂದ್ರನಂತಾರ್ಭಟಿಸುತೆಗ್ಗ | ಪಾನ
ಸುರಕುಲಗುರು ಮಯಿಾಗಳೆನಿಂದನಿಲವಿನಿಂ| ಭಸಿತಮಾಗೆಂದು ಸರ್ವೇಶ
ನಂ ಶಪಿಸಿದಂಪೇಳಲೇನಚ್ಚರಿಯನು॥೧೬॥ ಜಂಬುಕದಕೋಪದೋ
ಳ್ಪಾವರಣದರೋಮಂಗ | ಳೇಂಬಳ್ಕಿದಪವೆಮುನಿವಟುಶಪಿಸಲಭವಂ
ಗೆ| ಮುಂಬಪ್ಪುದೇಹಾನಿ ಕೇಳ್ಪನಸುನಗುತೀಶ್ವರಮುಂದೆನಡೆಯು
ತ್ತಿರಲು॥ ಎಂಬುದೇನಚ್ಚರಿವಡುತ್ತಧಿಕತೀವ್ರದಿಂ| ದಂಬಂದುಮುನಿ
ಗಳೊಡನೀವಾರ್ತೆಯಂಪೇಳೆ | ನಂಬಗಾತನವಚನಮಂತಾವೆಬಂ
ದರುರಿವುತಹೊಗೆವುತೀಶನೆಡೆಗೆ ॥೧೭॥ ಬಂದುಕಾಣುತ್ತೆಲ್ಲರುಂಶ
ಪಿಸಲಣುಮಾತ್ರ | ಮೆಂದುಬಗೆಯದಾದನೀಕ್ಷಿಸಿಮತ್ತೆಯುಂದರ್ಭೆ|
ಯಿಂದಿವ್ಯಮಂತ್ರಮಂಮಂತ್ರಿಸಿದೆ ಕಾಲಾಗ್ನಿಯಂತೈದಿಶಿವನಿದಿರೊ
ಳು॥ ನಂದಿಪೋಗಲ್ಬಳಿಕನಾನಾಪ್ರಕಾರದಿಂ| ಕೊಂದಪೆನೆನುತ್ತೆಸಗಿ
ದನಿತುಮಂಬಯಲಾಗೆ | ನಿಂದುಮಾರಣಹೋಮಮಂತೊಡಗಿದರ
ವರದನೇನೆಂಬೆನದ್ಭುತವನು॥೧೮॥ ಯೋಜನಸುವಿಸ್ತೀರ್ಣದೊ
ಳ್ಕುಂಡಮಂಸೃಜಿಸಿ| ಮೂಜಗದಸಿದ್ಧಸಮಿತ್ತಿಗಳೊಳವರಾಜ್ಯದಿಂ|
ದಾಜಗತ್ಸಿದ್ಧನಾಲ್ವತ್ತೆಂಟುಸಾವಿರಮಹಾಮುನಿಗಳೆಲ್ಲಿಕುಳಿತು॥ ಆ
ಜಾತವೇದನೊಳು ಘೋರಮಂತ್ರಂಗಳಿಂ | ದೀಜಟ್ಟಿಗಾರನಂದಹಸೆ
ನುತ್ತಾಹುತಿಸ | ಮಾಜಮಂಬೇಳುತಿರ್ದರ್ಕ್ಕೋಟಿಶತಕೋಟಿಗಳ
ನೋವರೋವರಂದು॥೧೯॥ ಹೊಗೆಹೊಗೆದುಸುತ್ತಲೆತ್ತೆತ್ತಲುಂ
ಸಲಿಸುತ್ತಿ| ದೊಗೆಯುಚೂಣಯುನೊತ್ತಿನೂಂಕಿನೆರೆಭುಗಿಭುಗಿ| ಲ್ಭು
ಗಿಲೆನೆತ್ತುರಿವಶಿಖಿನಾಲಿಗೆಯೊಳೊಂದರಿಂದುಗ್ರಮಾಗಿಕೂಡೆ॥ ನೆಗೆ
ವಂದುಗ್ರಬಗ್ಗಂಘೋರಸರ್ಪಂಗ| ಳೆಗಣತಾಯುಧಮೇಳೆಭೂತಗಣ
ಶಕ್ತಿಗ| ಳ್ಮಿಗುವಪಸ್ಮಾರಮೆಂಬದ್ಭುತದರೂಪಂಗಳಿಂರ್ಭಟಿಸುತಿಂ
ತೆಂದವು ॥೨೦॥ ಬೆಸಸುಬೆಸಸಾಹುತಿಯುನಮಗೆನುತ್ತೊಡನೆಗ |
ರ್ಜಿಸುವನಿತುಮಂನೋಡಿಸನ್ನೆಯಿಂದೀಶನಂ| ಮುಸುಕಿನುಂಗೆ
ಲ್ವೇಳಲೊಡನೀಶನಂ ಕಾಣುತಾರ್ಭಟಿಸಿಮೇಲ್ವಾಯಲು ॥ ನಸು
ನಗುತ್ತುರಳೆಯಂತಾಳ್ದುಪುಲಿಯಂಸೀಳ್ದು| ಪೊಸಸಮ್ಮನುಟ್ಟುಫಣ
ಗಳತೊಟ್ಟುಕೈದುಗಳ| ನೆಸಕದಿಂಧರಿಸಿಶಕ್ತಿಯುನೊರಸಿಮತ್ತೆಬಪ್ಪ
ರಿಯನಾಂತನಿಕರದೊಳು॥೨೧॥ ಮತ್ತಪಸ್ಮಾರವತಿಕೋಪದಿಂರು
ದ್ರನಂ | ಮುತ್ತೆಮುಂದಲೆವಿಡಿದುಕೆಡಹಿಪಾದಂಗಳಿಂ | ತೊತ್ತಳಂ
ದುಳಿದುತಾಂಡವರೂಪಮಂಧರಿಸಿಕುಣಿಯುತ್ತಿರೆಭೂತಂಗಳು॥ ತತ್ತ

ಧಿಮಿಧಿಮಿಕೆಂದು ತಾಳೆಮದ್ದಳೆಗಳುಮ । ನೊತ್ತಿ ಪಾಡುತ್ತಿರಲ್ವಿಸ್ಮಯಂಬಟ್ಟು ಮುನಿ। ಸ್ತೋತ್ರಮಾರ್ಗವನೆಂದು ನಿಶ್ಚೈಸಿ ನಿಗುರೊನಾಲಿಗೆಯಿಂದ ಪೊಗಳ್ದರಂದು ॥೩೨॥ ರಕ್ಷಿಸರಿತರಿಯದ ಮರುಳ್ಗಳಂ ಪರಮೇಶ । ರಕ್ಷಿಸೈ ಕಂಡು ಕಾಣದ ಪ್ರಟ್ಟುಗುರುಡರಂ। ರಕ್ಷಿಸೈ ಕೇಳಿ ಕೇಳದ ಮೂಗ್ಗಬಧಿರರಂ ನೀನೆನುತ್ತಡಿಗೆರಗಲು॥ ಈಕ್ಷಿಸಿ ಕೃಪಾವಲೋಕನದೊಳವರೆಲ್ಲರನು। ಪೇಕ್ಷೆಯಿಲ್ಲದೆ ಸಂತವಿಟ್ಟು ಬೀಳ್ಕೊಳೆ ತಮಗೆ। ಶಿಕ್ಷೆಗೆಯ್ವ ಮುಳಜಾನೋಪದೇಶವನೆಂದು ಬಿನ್ನಪಂಗೆಯ್ವರಂದು ॥೩೩॥

ಎನಲೀಶ್ವರಂ ಕರುಣದಿಂ ಕರಕಪಾಲವನುಂ । ಮನವೊಲಿದು ಭೈರವನ ಕೈಗಿತ್ತು ಕೂಡೆ ಮುನಿ। ಜನಕೆ ತತ್ವಜ್ಞಾನಮಂ ಬೋಧಿಪುಜ್ಜಗದೆ ದಕ್ಷಿಣಾಮೂರ್ತಿರೂಪಂ ॥ ಅನುನಯನದೊಳಾಂತು ಬೋಧಿಸಿ ಮುನಿಪರಂ ತಪರ। ವನಿತೆಯರ್ಸಹವಾಗಿ ಬೀಳ್ಕೊಟ್ಟು ಗಿರಿರಾಜ । ತನುಜೆಯುಂ ನೆನೆದೈದಿ ಕೈಲಾಸಮಂ ಪೊಕ್ಕು ವಿಭವದಿಂದಿರುತಿರ್ದನು॥೩೪॥

ಇಂತೆಸೆವ ಚೆನ್ನಬಸವೇಶ್ವರಪುರಾಣಮಂ । ಸಂತಸದಿ ಬರೆದವರ್ಗೋದಿದರ್ಗರ್ಥವಾ । ದ್ಯಂತಮಂ ಬಿಡದೆ ಪೇಳ್ದರ್ಗೆ ಪರಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ ॥ ಸಂತತಂ ಸಕಲಸುಖಮಂ ಸಕಲಭೋಗವುಮ ನ। ಸಂತ ಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ । ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದಂ ... ॥೩೫॥

ಎರಡನೆಯ ಕಾಂಡದಲ್ಲಿ ೯ನೇ ಸಂಧಿ ಮುಗಿಯಿತು.

## ೧೦ನೇ ಸಂಧಿ.

ಸೂಚನೆ॥ ಭೃಗುಶಾಪದಿಂದ ಹರಿ ಮತ್ಸ್ಯಾವತಾರದಿಂ। ನಿಗಮಂ
ಗಳಂ ತಂದು ಬಾಳ್ಕೆ ಹಂಕರಿಸಲಾ । ವಿಗಡಮೀನಂ ಕೊಂದು ಕಂ
ಕಾಳಧರ ಲೀಲೆಯಿಂದಲಭವಮ್ಮೆರೆದನು॥

ಪದ॥ ಹರಿಭೂಷ ಹರಿದಹನ ಹರಿವಸನ ಹರಿಶಯನ। ಹರಿತನುಜ ಹರಿಮುಖ್ಯಸುರವಿನುತ ಹರಿಚರಣ। ಹರಿಹರಿಹರಿಪ್ರಸಖ ಹರಿನಯನ ಹರಿಜನಕ ತನಯಾನುಜಾತವರದ॥ ಹರಿತನಯ ಸಂಹಾರ ಹರಿಕಲಾಲಂಕಾರ। ಹರಿಜಾತಜಾತಜಾತಪ್ರಮದವಿಧ್ವಂಸ। ಹರಿಕೋಟಿಸಂಕಾಶ ಪಂಪಾವಿರೂಪಾಕ್ಷ ರಕ್ಷಿಸಾನತಜನರನು॥೧॥ ಆದಿಯೊಳು ರಾಮಕೇಳ್ತಮನೆಂಬ ಖಳನಖಿಳ। ವೇದಮಂ ಕದ್ದಬ್ಧಿಯೊಳು ಮುಳುಂಗಲ್ಕೆಟ್ಟು ಪೋದವವನಿಯ ಸದಾಚಾರ ಸುತಪೋಧರ್ಮ ಜಪಹೋಮನೇಮಂಗಳು॥ ಆದಿವ್ಯಮಂತ್ರಮುಖ ಹವ್ಯಕವ್ಯಾದಿನಾ । ನಾದಿವಿಜತರ್ಪಣಂಗಳ್ಬಳಿಕ ದೇವತತಿ। ಗಾದುದೈಶ್ವರ್ಯನಾಶಂ ಬಹುಕ್ಲೇಶಮುಪಸಂತೋ

ಷವೇನೆಂಬೆನು ||೨|| ಇಂತು ಕೆಲಕಾಲವಿರುತಿರ್ದು ನಾನಾದೇವ| ಸಂ
ತತಿ ಹಿರಣ್ಯಗರ್ಭಂಗೆ ಮೊರೆಯಿಡಲುಮಾ| ಕಾಂತನಿಂದಲ್ಲದಿದು ಹರಿ
ಯದೆಂದವರನೊಡಗೊಂಡು ಶಿವನೆಡೆಗೆ ಬಂದು|| ಸಂತಸದೊಳೆಲ್ಲರುಂ
ಮೆಯ್ಯಿಕ್ಕಿ ಸಕಲವೃ | ತ್ತಾಂತಮಂ ಬಿನ್ನವಿಸೆ ಕೇಳ್ದೀಶ್ವರಂ ರಮಾ|
ಕಾಂತಂಗೆ ನೇಮಿಸಲ್ತದ್ವಿಷ್ಣು ಪೊರಮಟ್ಟನಭವನಡಿಗಳಿಗೆ ಮಣಿದು ||೩
ನಿಮಿಷದೊಳು ಶಂಭುವಂ ಬೀಳ್ಕೊಳುತಮ್ಮಹಾ| ನಿಮಿಷರೂಪಂ ತಾ
ಳ್ದು ವಾರ್ಧಿಯಂ ಪೊಕ್ಕಂದ | ನಿಮಿಷರಿಪುವಂ ಕೊಂದು ನಿಗಮಂಗಳಂ
ದೇವತತಿಗಿತ್ತ ಸಂಸ್ಕೃತಿಯೊಳು|| ಕ್ರಮಿತಪ್ಯರಾಟ್ಕಾಯಮಂ ಧರಿಸೆ
ಕೂಡೆ ಸಂ| ಕ್ರಮಿತನಿಖಿಳಾಬ್ಧಿಗಳೆ ಮೇರೆಯಂ ಮೀರಲಾ| ಕ್ರಮಿತಜ
ಲದಿಂ ಧರಣಿ ಶರಧಿಯೊಂದಾದವದನೇನೆಂಬೆನಚ್ಚರಿಯನು ||೪|| ಪೊದೆ
ಮುಗುಳೆಲಬ್ಧಿಯಂತಿಂತಾಗಿ ತಾಯ್ಮಳೆ | ಲ್ಗಡೆಗಾಣಲುಣ್ಮುತಿಪ್ಪಸು
ಮೊಯ್ಲ್ಲಿನಿಂದ ಬುಡ| ಬುಡನೇಳ್ವ ಬುದ್ಬುದಂಗಳು ಹಿಮಾದ್ರಿಯು ಮೊ
ಲಾಕಾಶಮಂ ಚುಂಬಿಸುತ್ತಿರೆ| ಕುಡಿವಾಲನಪ್ಪಳಿಸಲೊಗೆದ ತುಂತು
ರು ಜಗಕೆ| ಕಡೆಗಾಲಮಂ ಮಾಡಲಮರರೊಡನಜಸೈದಿ| ಮೃಡನಡಿಗೆ
ಬಿನ್ನವಿಸಲಬ್ಧಿಗೈತಂದು ಮೀನಂ ಕಾಣುತಿಂತೆಂದನು ||೫|| ಕಟಕಟಾ
ಈ ಮತ್ಸ್ಯಮಿಲ್ಲಿರಲು ಜಗಕೆ ಸಂ| ಕಟಮುಪ್ಪುದಚ್ಚರಿಯೆ ನೋಡೆಂದು
ಕೂಡೆ ಲಟ | ಕಟಸಿ ಕಡಲೊಳು ಪೊಕ್ಕು ಘುಡುಘುಡಿಪ ಮೀನ ಬಗ್ಗ
ದಿಯು ನೊದೆದಾಂಕಿ ಕೂಡೆ|| ಕಟವಾಯ್ಗೆ ಕೈಯ್ಯನಿಟ್ಟರದೆರಳ್ಸೀಳಾ
ಗಿ | ನಿಟನಿರಿಸ್ಸಿ ಟಲೆನಲು ನೆಟ್ಟಲು ಮನು ರೆಮುರಿದು | ನಿಟಲಾಕ್ಷ
ನಂದು ಕಂಕಾಳಾಯುಧಂ ಬಿಡಿದನೆನೆ ರಾಮನಿಂತೆಂದನು ||೬|| ವಿರಚಿ
ಸೆಲೆ ಚೆನ್ನಬಸವೇಶ ತದ್ವಿಷ್ಣುನಾ | ಹರನಾಜ್ಞೆಯೊಳು ಲೋಕಹಿತ
ಮತ್ಸ್ಯರೂಪಮಂ | ಧರಿಸಿ ತಮಸಂಕೊಂದು ವೇದಮಂ ತಂದ ಕಡ್ಡಂ
ಮುಗಿದ ಮೇಲದಕ್ಕ|| ಶರಧಿಯೊಳಗಜ್ಞಾನದಿಂದಹಂಕರಿಸಿರ್ದ| ಪರಿಯ
ದೇನೀಶ್ವರನದಂ ಮರಳಿಪಿಂತೆಸಂ| ಹರಿಸಲೇಂ ಕಾರಣಮೆನುತ್ತೆ ಬಿಂ
ನವಿಸಿದಂ ನಿಟಲತಟಹಸ್ತನಾಗಿ||೭|| ಅದನೊರೆದಪೇಂ ಸಿದ್ಧರಾಮ ಕೇ
ಳಾದಿಗಾ | ಲದವೈರದಿಂದಮರದನುಜರ್ಗೆ ಕಾಳೆಗಂ| ಪುದಿಯಲಾದಿ
ವ್ಯಸಾಹಸ್ರವರ್ಷಂಗಳೀರೈದಾಗಲಾ ಮಧ್ಯದ|| ಕದನದೊಳು ಪುತ್ರ
ಮಿತ್ರಾನುಜಾಗ್ರಜರಳಿದ| ಹದನನೀಕ್ಷಿಸಿ ಕಲಹಮಂ ಮಾಣ್ದು ಪುರಕೈ
ದಿ | ಮುದಮಡಗಿ ದಿವಿಜಪತಿ ಗುರುವಿಂಗೆ ಬಿನ್ನೈಸಲಾತನೊಡನಿಂ
ತೆಂದನು ||೮|| ಸುತ್ರಾಮ ಕೇಳ್ಕಲಹಮೆಂಬುದು ಪಟದೊಳಗೆ| ಚಿ
ತ್ರಿಸಿದ ಬೊಂಬೆಗಳ ಕಾಳಗಮೆಸಲ ಪುತ್ರ| ಮಿತ್ರಬಾಂಧವರ ಕೇಡಿಂ

ಗಳೆಲ್ಲಾಡೆದೇವಲೋಕದೊಡತನವೇತಕೆ ॥ ಸತ್ರದಿಂ ಬಳಲಿ ಸಾಲದೆ ನಿನಗೆ ದಿವಿಜಪತಿ । ಚಿತ್ರವಿದು ನಿನ್ನಾಳ್ತನಂ ಸೋಲಗೆಲವೀಶ । ಪುತ್ರನಾದೊಡೆ ಬಿಡುವೃದೇ ಮರುಳೆ ಕೇಳೆನುತ ಜೀವನರಿದಿಂತೆಂದನು॥ ದೇವೇಂಗ್ರ ಕೇಳ್ ಹಿಮಾಲಯತಟದೊಳಾಶುಪಾ । ದೇವನಂ ಭಜಿಸಿಯುಳಿದವರನೆಬ್ಬಿಸುವಸಂ, ಜೀವನಿಯ ಮಂತ್ರಮಂ ಪಡೆವೆನೆಂದಮರಗುರು ಪೋಗಿ ತಪದಿಂದಿರುತಿರೆ ॥ ಈ ಸಾರ್ತೆಯಂ ಕೇಳುತಳ್ಕಿನಿಂದಸುರಗುರು। ಜೀವನಿರ್ದೆಡೆಗೈದಿ ತನ್ಮಂತ್ರಮಂ ಕುರಿತು। ಭಾವದೊಳು ಶಂಭುವಂ ನೆಲೆಗೊಳಿಸುತುಗ್ರತಪದಿಂದಿರ್ದನವನಿದಿರೊಳು ॥೧೦॥

ಅಂತಸುರಸುರಗುರುಗಳೀರ್ವ್ವರುಂ ಮುಂಚಿಶಿವ। ನಂ ತಮತಮಗೆ ಮೆಚ್ಚಿಸುವೆವೆಂದು ಚಿರಕಾಲ। ಮುಂತಪಂಗೈಯಲೀಶಂ ಪ್ರಸನ್ನತೆಯನೊಳ್ಪೈತಂದವರ್ಗಿರಿತ್ತಂಡದ॥ ಮುಂತೆನಿಂದೆಲೆ ಜೀವಶುಕ್ರರಿರ ಬಳಲಿದಿರಿ। ಇಂತಳುವದುಸುರಿರ್ವ್ವ ನಿಂಮ ಬಯಕೆಯನೆನಲು । ಸಂತಸದೊಳೀರ್ವ್ವರುಂ ಬಿನ್ನೈಸಿದರ್ದೊಡೆ ತಂತಂಮ ಬಯಕೆಗಳನು ॥೧೧॥ ಅಸುರಸುರಗುರುಗಳಿಷ್ಟಾರ್ಥವೊಂದಾದವಿಂ । ನುಸುರಗಿರಬಾರದುಸುರಿದೊಡೆದೈತ್ಯರಿಂದು। ಶ್ವಾಸಮಪ್ಪುದಿದನೊಂದುಪಾಯದೊಳು ತಮಗಸಾಧ್ಯಮಾಡಿಕಳೆವೆನೆಂದು॥ ಪೆಸರಿಂದ ಕರದೀವರ್ಗರಂ ನಿಮ್ಮ ಬಯಕೆಗಳ। ನೊಸದೀವೆನದು ನಿಮ್ಮ ಕೈಯಲಪ್ಪೊದೆಮಾಳ್ಪ । ದಸಮಮಂತ್ರದಪ್ರನಷ್ಟದಣಿಯು ಕೇಳಿರೆಂದೀಶ್ವರಂ ನಿರವಿಸಿದನು ॥೧೨॥ ಚಚಸ್ತ್ರಕವಾಗಿ ಘೋರಕುಂಡಮಂತೆಗದುಪೇ। ಗಿರ್ಜ್ಜನದರೊಳಗೊಟ್ಟ ಈವರ್ಗರುಂ ಪುಗುತೊಡನೆ। ಪೆಚ್ಚುನರಿಯಂ ಸೋಂಕೆ ತಲೆಕೆಳಗುಮಾಗಿನಪದೊಳು ನಿಂದು ನಿಶ್ಚಲತೆಯಿಂ॥ ಬೆಟ್ಟದಾಹೊಗೆಯನಾಸ್ವಾದಿಸುತೆ ತನ್ಮಂತ್ರ। ದುಷ್ಟರಣೆಯಿಂ ದಿವ್ಯಸಾಹಸ್ರವರುಷಮಿರೆ । ನಷ್ಟದಂತೀ ಮಂತ್ರಸಿದ್ಧಿಯಪ್ಪುದು ನಿಮಗೆ ಕೈಕೊಂಬುದೆನೆಂದನು ॥೧೩॥ ಕೇಳಿನಡೆನಡುಗಿದಂದಿವಿಜಗುರು ದೃಢಶಕ್ತಿ । ಸಾಲದೆ ನಗೀತಪಸ್ಸಿಂಗೆಂದುಶಕ್ತಿಕರಾ। ಮಾಳಿಯುಡಿಗೆತಗಿ ಬಿನ್ನವಿಸಿಹಿ ಮೆಟ್ಟ್ರದಂ ಶುಕ್ರನಾ ಖಳಕುಲಕ್ಕೆ॥ ಮೂಲಮಂತ್ರದ ಗುರುವಲಾ ಬಳಿಕ ವಿಸ್ತರಿಸಿ । ಪೇಳೆಲಳೆವಲ್ಲ ಸರ್ವಜ್ಞನಂ ಜಾಣ್ಣುಡಿಯು। ಕೀಲಣಕೆಯಿಂಗೆದ್ದನಭವನಿಸೀನೆನ್ನಿಂಗಲಸುದೆನಲ್ ಮಾಳ್ಪೆನೆಂದು॥೧೪॥ ಮರಳಿ ಮೆಟ್ಟಿದನಭವನವನಚದುರಿಂಗೆಭಾ। ಪುರೆಭಲರೆ ಚತಾಗೆಂದು ಮೂಗಿನೊಳ್ಬರಳಿಟ್ಟ। ಶಿರವನೊಲದೊಲದು ಕೇಳೆಲೆ ಶುಕ್ರ ನೀಂ ಜಾಣನಪುದೆನುತೆ ಕರುಣದಿಂದಂ॥ ಪರಮಮಂತ್ರೋಪದೇಶವನಿತ್ತು ಶಂಕರಂ । ತೆರಳಿದಂ ಕೈಲಾಸ

ಗಿರಿಗಿತ್ತಲತ್ತಲತ್ತಿ। ಹರುಷದಿಂಭೃಗುಸುತಂಸಂತಸದೊಳಿರ್ದ ನೆಲೆರಾ
ಮುಕೇಳಚ್ಚರಿಯನು॥೧೫॥ ಪಲ್ಲವಿಸಿದುದುಶುಕ್ರನಾನಂದಲತೆಶಿಷ್ಯ।
ರೆಲ್ಲರಂಕರೆದೆಂದನೆಮಗೀಗಪಾರ್ವತೀ। ವಲ್ಲಭನಕರುಣಮಾಯ್ತಾ
ಮಂತ್ರಸಿದ್ಧಿಯಪ್ಪನ್ನೆಗಂಸೇವಿನಿಬರು ಸಲ್ಲಲಿತಭಸಿತರುದ್ರಾಕ್ಷಜ
ಡೆಗಳಧರಿಸು। ತಲ್ಲಲ್ಲಿತಪಿಸುತಿರಿನಿಮ್ಮ ವೈರಿಗಳಟ್ಟಿ। ಕೊಲ್ಲಬಂದರೆ
ಕಾಯ್ವೆನೆಮ್ಮಪಿತಭೃಗುವಾತನಾಶ್ರಮಂಬುಗಿರೆಂದನು ॥೧೬॥ ಎಂ
ದವರನೆಲ್ಲರಂಕಳುಪಿಪಿತನಾಶ್ರಮಕೆ। ಬಂದುತದ್ವೃತ್ತಾಂತಮಂಬಿ
ನ್ನಪಂಗೆಯ್ದು। ತಂದೆಯಂಬೀಳ್ಕೊಂಡುಪೋಗಿತಪಮಂಮಾಡುತಿರೆ
ಶುಕ್ರನತ್ತಲಿತ್ತ॥ ಮುಂದುಗೆಟ್ಟಮರರ್ಕೈತಂದುಶುಕ್ರಂಮಾಡಿ। ದಂದ
ಮಂಹರಿಗೆಬಿನ್ನವಿಸಲಾತಂನುಡಿದ। ನಿಂದುಮೌಳಿಯವರಂಪುಸಿವು
ದೇಯೆನುತೆತದ್ವಿಷಲ್ಲಮಗುಳಿಂತೆಂದನು ॥೧೭॥ ಬಲ್ಲಿದಂಶುಕ್ರನಾ
ಮಂತ್ರಸಿದ್ಧಿಯಪಡೆದು। ಮೆಲ್ಲನೈತಪ್ಪಿನಂದನುಜಸಂಕುಲಮನಾ।
ನಿಲ್ಲೆನಿಸಬೇಕೆನುತಲಲ್ಲಲ್ಲಿಯುಗ್ರತರತಪದಿಂದಲೊಪ್ಪುತಿರ್ಪ॥ ಖುಲ್ಲ
ದಾನವಸಮೂಹಂಗಳಂಬಿಡದೆಪೊ। ಕ್ಕಲ್ಲಿಪೊಕ್ಕರಸಿನಾನಾಪ್ರಕಾರಂ
ಗಳಿಂ। ಕೊಲ್ಲಿಯೆಂದಷ್ಟದಿಕ್ಪಾಲರ್ಗೆವಿಷ್ಣುನಾಜ್ಞಾಪಿಸಿದನಾಕ್ಷಣದೊ
ಳೆ ॥॥೧೮॥ ಹರಿಯನೇಮದೊಳೆಜಾತುರ್ಬಲಂಗಳ್ವೆರಸು। ಹರಿ
ಮುಖ್ಯಾದಿಗಧಿಪರ್ಸುತ್ತಲತ್ತಲುಂ। ಹರಿಹರಿದುಗಿರಿವನಂನದಿನ
ದಂಗಳತೀರದಲ್ಲಿನಾನಾತೆರದೊಳೆ॥ ಹರನಜಾನದೊಳಿರ್ಪದೈತ್ಯರಂ
ಕೊಡೆಸಂ। ಹರಣಮಂಮಾಡತೊಡಗಿದರಸುರಕಾಯದಿಂ। ಹರಣಂ
ಗಳಿವುತ್ತಿರ್ದ್ದವುನಿರಾಯುಧರನಿರಿವಲ್ಲಿತಡೆಬಡೆಗಳೆಂಟೆ॥೧೯॥ ತರಿ
ದರಿರಿದರ್ಕೊರ್ಡೆಕತ್ತರಿಸಿದರ್ಪೊಯ್ದು। ರರಿದರೆಕ್ಕಿರೊಕ್ಕಟಿದರ್ಕ್ಕರಪದಂ
ಗಳಂ। ಮುರಿದಿಟ್ಟರಟ್ಟಿದರ್ಕುಟ್ಟಿದರ್ಪೆಣಗಳನೊಡಲ್ಗಳೊಳೆಶಲ್ಯಂಗ
ಳೆ॥ ಮುರಿಯೆಸಿಕ್ಕಿದರೊಕ್ಕಲಿಕ್ಕಿದರ್ಮುಕ್ಕಿದ। ರೊಕ್ಕರದರ್ರರದರೊಕ್ಕಂ
ದರಂದಗೆಡಿಸಿದರಸುಂ। ದೊರವಿನಂಬಾಯ್ಗಳೆಂತೆರವಿನಂಮೈಗಳಂ
ಮರವಿನಂಸುರರಸುರರ ॥೨೦॥ ಮೆಂತಯಿಸಿಲುಬ್ಧಕರುಮೃಗಸಮೂ
ಹಂಗಳಂ। ಗೊಂಟುಗೊಂಟುಂಸೋಹುತರುತಿಪ್ಪಮಾಳ್ಕೆಯಿಂ। ದೆಂ
ಟುದೆಸೆಯಂಬಿಡದೆಕೊಲ್ವದಿಕ್ಪಾಲಕರಧಾಳಿಬೆನ್ನಟ್ಟಿಬರಲು॥ ಕಂಟ
ಕಂಗಳ್ನಾಂಟಬಿದ್ದುಕಾಲೊಡೆದುಬಾ। ಯ್ಗಂಟಲುಗಳೊಣಗಿಗತಿಗೆ
ಟ್ಟುಮತಿಯಳಿದೇಸು। ಗೆಂಟೊಭೃಗುಮುನಿಪನಾಶ್ರಮವೆಂದುಕಂ
ಗೆಟ್ಟುಬರುತಿರ್ದರಾದನುಜರು॥೨೧॥ ಹರಿಸುರೇಂದ್ರಾದಿನಾನಾದಿವಿ
ಜಯೋನಿಜ। ರ್ಕ್ಕರುಣಮುಳ್ಳೆನಿತಿಲ್ಲದೀನಿರಾಯುಧರನೀ। ಪರಿಕೊಲ್ಲ

ಱವರೆಂತುಗೆಯ್ವರೇಕ್ಷೈಸೆಗೆಬಾಯ್ವಿಟ್ಟು ನೆಲವೊರೆಯನಿಟ್ಟು॥ ತಿರು
ತಿರುಗಿಬಾರಿವರಿದೋಡಿಹೊಗದೆಸೆಗಾಣ । ದರಿಗಳಿಂಕಡಿಖಂಡವಾ
ದರರೆಬರ್ಕ್ಕಿಕ್ಕ । ಧೊರೆತಕ್ಕ ಸತ್ಕಹಾಕೋಪದಿಂಘುಡಿಘುಡಿಸಿಪಲ್ಮೊ
ರೆವುತ್ತಿಂತೆಂದರು॥೨೨॥ ಹುಟ್ಟಿದಂದಿಂದೆಸುರರೆಮ್ಮಂ ಕಂಡುಕಂ
ಗೆಟ್ಟೋಡುವವರಿಂದು ತಮ್ಮ ಬಾಳ್ದಲೆಗಳಂ ಕುಟ್ಟುವಂತಾಯ್ತು ಕು
ಲಿಮಾಸೆಯಂ ನರಿಗಳೆಲ್ಲಾಡುವಂತಾದುದೆಂದು॥ ಬೆಟ್ಟಂಗಳಂ ಕಿತ್ತು ಪೊ
ತ್ತುವರನಿಟ್ಟು ಬೆಂ । ನಟ್ಟಿಗಪೆವೆಂದೊಡನೆಗುರುವಿನಾಜ್ಞೆಗೆ ಭಯಂ ಬ
ಟ್ಟು ಭೃಗುವು ನಿಪಸಾಶ್ರಮವನೊಳಪೊಕ್ಕು ಬಾಯ್ವಿಟ್ಟು ವೊರೆಯಿ
ಟ್ಟರಂದು॥೨೩॥ ಎಲೆರಾಮ ಕೇಳ್ ಭೃಗುವು ನೀಕ್ಷ್ವಂಬಿತ್ತದೋ । ಕ್ಷೆ
ಲೆಗೊಳಿಸಿಶಂಭುವಂ ಬಹಿರಂಗವಮ್ಮರೆದು । ಸಲೆಸಮಾಧಿಯೊಳಿರ್ದ
ನಾತನರಸ್ತಂಗಿ ಪ್ರಖ್ಯಾತೆಯಾಸುರರಿಪುಗಳ್॥ ಕಳವಳದವೊರೆಗೇಳ್ದ
ದೇನೆಂದು ಬೆಸಗೊಳಲು । ಖಳರೆಂದರೆಲೆತಾಯೆ ನಿರಪರಾಧಿಗಳೆಂಮ ।
ನಳುಕದೆ ನಿರಾಯುಧರ ಸಮರರಿರಿದಪರೆಂದು ತಮತಮಗೆ ವೊರೆ
ಯಿಟ್ಟರು॥೨೪॥ ಅದೆ ಶಕ್ರ ಹಸ್ತವಜ್ರಾಯುಧಂ ನೆಗಪಿ ಕಿಡಿಗೆದರುತಿದೆ
ವಹ್ನಿ ಪಿಡಿದುಗ್ರಖಡ್ಗಂ ಕರದೊಳೊದರುತಿದೆ ಯಮನ ದಂಡಂ ನಿಮಿರಿ
ನಿರುತಿ ಕೊಂತಂ ಕೊಸರುತಿದೆ ಕೈಯ್ಯನು । ಅದೆವರುಣಕರಪಾಶವು
ರುಲಾಗಿ ಮಾರುತನ । ಗದೆ ತೂಗುತದೆ ಕುಬೇರನ ಬಲ್ಲೆಯಂ ಕೈಯ್ಯ ।
ನೊದದು ಬರುತಿದೆ ಬೇಗದೊಳ್ ಸಲಹು ಸಲಹೆಂದು ವೊರೆಯಿಟ್ಟರಾ
ದೈತ್ಯರು॥೨೫॥ ಇಂತಟ್ಟಿ ಬರ್ಪ ನಿರ್ಜರಭಯಕ್ಕೊಡನೊಡನೆ । ಪಿಂ
ತಿರಿಗಿನೋಡಿ ಕಣ್ಣಾಯ್ವಿಡುವ ತಿಷ್ಯರಂ ಸಂ । ತೈಸುತಂ ಜಬೇಡೆಂ
ದಭಯವಿತ್ತು ಚಣದೊಳ್ ದಿವ್ಯಮಂತ್ರಂಗಳಂ॥ ಕಂತುಹರನಂ ಸ್ಮರಿ
ಸಿ ಮಂತ್ರಿಸಲು ಸಕಲಸುರ । ಸಂತತಿಗೆ ಕರಗತಿಸ್ತಂಭಂಗಳಾಗಿರೆ ಪ । ಟಾಂ
ತರದೊಳೆಸವ ಬೊಂಬೆಗಳಂತೆ ಕಂಗೆಸದರೇನೆಂಬೆ ನಟ್ಟಿರಿಯರು॥೨೬॥
ಅನಿತರೊಳ್ ಸುರಪನಾ ಪಿಂಗಡೆಯೊಳೈತಪ್ಪ । ವನಜಾಕ್ಷನಂ ನೊ
ಡಿವಿಷ್ಣು ಕೇಳಿವಳೀಗ । ಳೆನುಪಮಿತಮಾಯಾದಿದೇವಿಯಿವಳಿಂದೆಂ
ಮುಕ್ಕೈ ಪಾಲ್ಗೆ ತಡೆಯಾದವು॥ ಅನುಮಾನಿಸದೆ ಚಕ್ರದಿಂದಿಟ್ಟು ಕೊ
ಲ್ಲೆಂಬ ಧ್ವನಿ ಹಿಂಚಲವಳ ತಲೆಯುಂ ಬೀಳ್ವಿನಂ ಮಿಡ । ಲ್ಮಿನಿಪಹುಹಾ
ರವಂದು ಸಲುಬಿಖೇತ್ರಿಯ ಜೀವನಂ ಪೋಯ್ತು ನಿಮಿಷದೊಳಗೆ॥೨೭॥
ಖೋಯೆಂದು ದಮರಾಳಿ ಹರುಷದಿಂ ಕಂಡುಸಾ । ಹಾಯೆಂದು ದನುಜ
ರೆಡೆಗೆಡದವನಿಗೊಡನೆದ್ದು । ಬಾಯ ಸಂಗೈಗಳಿಂ ಬಡಿದು ಬಸುರಮ್ಮೊ
ಡಿಕೊಳುತಳುತ ಪೊರಳುತಕಟ ॥ ತಾಯೆ ಕೇಳ್ ಪಾತ್ರರೆಮ್ಮ

ವಂನೀನಿಂದುಕಾ । ಯಲೋಸುಗಮಾಯ್ತಲಾಮರಣವಾಗಗುರು
ಕಾಯಲೆಮಗಮರರಂಕೊಂದುಸತ್ತಪೆನೆಂದು ಸಿಡಿಲಂತೆಗರ್ಜಿಸಿದ
ರು॥೨೮॥ಪ್ರಳಯಕಾಲದಸಿಡಿಲಗರ್ಜನೆಗಳಂಮಿಗುವ, ಖಳಕಠೋ
ರಧ್ವನಿಗಳಾವುನಿಖಿಳಕರ್ಣಂಗ । ಳೊಳೆಪೊಕ್ಕುಸರ್ವಾಂಗದೋಳ್ತೀ
ವಿಬಲಿದಿರ್ಪವರಸಮಾಧಿಯುಕೀಲನು ॥ ಕಳೆಯೆಮುಲಗಿದರೇಳ್ವತೆ
ರದೆಕಂದೆರದಿದಿರೊ । ಳೆಳಿದಸತಿಯುಂಕಂಡುಹಾ ತರುಣಿಹಾ ಎಂದು।
ಹಲುಬಿದಂಭೃಗುಪೆಣ್ಣಗಳ್ಕೆಯೆಂತಪ್ಪ ರಂಬೆಮೆ ಗೊಳಿಸದೇಂಬಿಡು
ವ್ರದೆ॥೨೯॥ಏತೆರದೊಳಾಯ್ತುಕಟತರುಣಿನಿನಗೀವ್ರ್ಯತಂ। ಮಾತಾ
ಡುವುನದನ್ನೆನಿನ್ನನಾಂಬಹುದಿವಸ। ವಿಾತಪಸ್ಸಿಂದಗೆದ್ದರೆಮುಳಿ
ದೆಯೋಬಂದೆನೆಳಬಲೆನೋಡೆಂದನು॥ ಕಾತುರದೊಳಾಲಿಂಗಸಮಾ
ಡುಕೊಡೆನುತ, ತಾತಲೆಯನೆತ್ತಿಕೊಂಡೊಡನೆಮುಂಡಾಡಿನಾ।ನಾ
ತೆರದೊಳಳಲುತಿರ್ದ್ದಂಸತ್ರಿಯರೂಪುಗುಣಶೀಲಂಗಳಂಬಣ್ಣಿಸಿ ॥೩೦॥
ಸ್ನಾನವಂಮಾಡಿಬಂದೇಂಹೋಮಕೆಡೆಮಾಡೆ । ನೂನದೇವಾರ್ಚ
ನಾಪರಿಕರಮನಿರಿಸುಸು ಜ್ಞಾನಿಮುನಿವರರಾಶ್ರಮಕ್ಕೆ ಬಂದಿಹರವ
ರ್ಗರ್ಘ್ಯಪಾದ್ಯವನೊಡೆಬಚು॥ ಏವಕಟಮಾತಾಡಹೆತರುಣಿನಿ
ನ್ನಿಂದ।ಮೋನಡಸುದೀತಪಸ್ಸಿಂದುವರೆಗಮ್ಮುಂಟೆ । ನಾನಾವತೆರ
ದೊಳೀಶನನೊಲಿಸಲಬಲೆಪೇಳೆಂದುಮರುಗುತ್ತಿರ್ದನು॥೩೧॥ ಪರ
ನೊಲವಿನಿಂದಾದದಿವ್ಯಮಂತ್ರದಪ್ರುನ।ಸ್ಮರಣೆಯಿಂಸಂಜೀವನದಮಂ
ತ್ರಮಂಪಡೆದು। ಹರುಷದಿಂನಿನಗೆದಗಬಪ್ಪನಿಜಪುತ್ರನೊಡನೇನೆಂ
ಬೆನೀಕೇಡನು ॥ ತರುಣಿನಿನ್ನೊಡಹುಟ್ಟಿದಗರ್ಗನಾನೇನೆನು। ತ್ರೊತ್ತ
ರವೆನೀಯಳಿವನಕಟಕಟಹಾಶಂಕರನ । ಕರುಣವೆಳೆದಾಗಿಮೋಲ್ದು
ಡಿಸಿತಯ್ಯೋಯೆಂದುಭೃಗುದುಃಖಿಸುತ್ತಿರ್ದನು॥೩೨॥ ಇಂತುಮೋ
ಹಾಂಧಕಾರಕವಿಯೆಕಣ್ಣಾಣ, ದಂತೆದುಃಖಿಪಮುನಿಗೆಕೋಪಮುದ
ಯಿಸಿಗಿವಿಜ। ಸಂತತಿಯಬುರುಪುವಾಡಿಬೆವೇಳೆಯೆಂದುದೂರಂಬೀ
ರಿಪೇಳ್ವೆವೆಂದು॥ಮುಂತಡ್ಡಬಿದ್ದೆಗದ್ದೈಕ್ಯಮುಗಿದುಕೇಳ್ಮತ್ತೆ। ಕಾಂ
ತನಿಮ್ಮಯಕ್ಕೆಯಡೆಯಮಕ್ಕಳಂವಿಷ್ಣು।ಮುಂತಾದಸುರರಟ್ಟಿಕೊಂ
ದರಗಣತದೈತ್ಯರಳಿದರೆಂದುಸುರ್ದರಂದು ॥೩೩॥ ಪೊಕ್ಕಲ್ಲಿಪೊಕ್ಕ
ಬರಲೋಡಿನಿಮ್ಮಾಶ್ರಮಂ । ಚೊಕ್ಕನೊರೆಯಿಡುತಿರಲ್ಕೇಮಹಾ
ಸತಿಕಾಣು । ತಕ್ಕರಿಂದೆಮಗಭಯವಿತ್ತೆಮ್ಮನಿಟ್ಟಬಪ್ಪಮಮರಂ
ತಂಬಿಸಲ್ಕೆ॥ ಚಕ್ರನೀಕೆಯಶಿರಂಪರಿದುಬೀಳಳ್ಕಂಡೆ । ಪಕ್ಕಕ್ಕೆಯಿಂ
ಸುರಸಮೂಹಮಿದೆನೋಡಿಯುನ। ಠಿಕ್ಕಯಡಗಿತುರೋಷಶಿಖಿಪೊ

ಣ್ಮ ಪೊಡೆಕರಿಸಿಪಬಿರ್ದುದನೇನೆಂಬೆನು ॥೩೪॥ ಕೂಡೆಭುಗಿಭುಗಿಲೆನುತ್ತುರಿವಶಿಖಿವ್ಯೂಯೊಳಗೆ। ಮೂಡಿದುರ್ದುಸುರಚೊಣಯೊಳಗ್ನಿಜಂಹೆಯಂ। ನೀಡಿದುದುಕಣ್ಣಿಷ್ಟಕದೆಕರಿಕುವರಿವುತಿರ್ದುದು ವಿಷ್ಣುಸುರಪಾರ್ದ್ಯರು॥ ಕಾಡೊಳೆರೆಬೆಂದಕೊರಡಂತಿರ್ದರವರುಗಳ। ನೋಡಿ ಕಡುಪಾಪಿಗಳಿರಾಮಹಾಸತಿಗಿಂತು। ಕೇಡನೆಣಿಸಿದರದಾರಾರೆಂದು ಭೃಗುಮುನೀಶಂಕಾಯುಂಬ್ಗರ್ಜಿಸಿದನು ॥೩೫। ಬಾಯಾರಿದರಸ್ಪುರರು ತದ್ವಿಷ್ಣುಕಂಪಿಸುವ। ಕಾಯದಿಂದೆಲೆಮುನಿಪಕೇಳೀಮಹಾಸತಿಗೆ। ಪಾಯಮನ್ನಿಂದಾಯುತ್ತುನೀಂಪೆರಮಋಷಿಯೆನ್ನಗುಣದೋಷಮನ್ನೋಡದೆ ॥ ಕಾಯಬೇಕೀತಪ್ಪನೆಂದಧಿಕವಿನಯದಿಂ। ದಾಯುತ್ರೀಗಂಗೆದ್ಯೆಸ್ವಂಬಡಲುಕೋಪಭಾ। ರಾಯುಮಾನಸನಾಗಿಭೃಗುಮುನೀಶಂಮಹಾವಿಷ್ಣುಗಂದಿಂತೆಂದನು॥೩೬॥ ಸಕಲಜಗಮಂಸಲಹುತಿರ್ದನೀಂಪುಣ್ಯಪಾ। ತಕಭೇದಮರಿದುರುಪಾತ್ರಾಕ್ಷಿಯಂಭಸ್ಮಧಾ। ರಕರನೇಶಿವನೆಂದುತಿಳಿದುನಿರಾಯುಧರನಿರಿವುದಲ್ಲೆಂದುಬಗೆದು॥ ಅಕಟಮುನ್ನೆವಂಶರಣುಪೊಕ್ಕುದಂಕಂಡುನಾ। ಟಕೆಯುಲಾಪೆಣ್ಗೊಲಿಯಭಟಗೆಂದುತಿಳಿದುಪೇ। ಸಿಕೆಯುಲ್ಲದಿನಿತುಮಂಕ್ಯೆಗೈದಭಾಪುಬಲ್ಲಿದರರಸಹೋಗೆಂದನು॥೩೭॥ ಇಂತೆಂಗುನುಡಿಯುಲಾವಿಷ್ಣುವತಿಭೀತಿಯಿಂ। ಕಂತುಹರಸನ್ನಿಭನೆಯುಜ್ಞಾನದಿಂಬಂದು। ದೆಂತಾದೊಡಂಕಾಯುಬೇಳೆನಲುಕರವೆತ್ತಿಘುಡಿಘುಡಿಸಿಕೋಪದಿಂದಂ ಭ್ರಾಂತಹೋಗಜ್ಞಾನಕೃತದಿಂಮಮಪರಣ। ಕಾಂತೆಯಂಕೊಂದೆಯುದರಿಂನೀನುಮಜ್ಞಾನ। ಮಂತಳೆದುಮತ್ಸ್ಯಾದಿದಶಜನ್ಮದಿಂದೆಜನಿಸೆಂದುಮುನಿಶಾಪಿಸಿದನು ॥೩೮॥ ನಡನಡುಗುತಾವಿಷ್ಣುಮಾಡಿದಕೆಫಲಮಾಯ್ತು। ಕೊಡುವಿಶಾಪವನೆನಲುಕೋಪದಿಂದಂಕೇಳಿ। ಸುಡುವೆನಿಲ್ಲಿಂದ್ಯೆದುಮೀಶ್ವರಂಬಲ್ಲನೆನು ತೊಡೆನೆಶಿವಮಂತ್ರದಿಂದಂ॥ ಬಿಡದೆಕಳಶೋದಕಂದವಳೆಜೀವಮಂ। ಪಡೆದನಾಮುನಿಯುತ್ತಸುರರ್ಪ್ಯೆಟದಲೋಕ। ದೊಡೆಯುನೆನಿಪೀಶನಂಕೂರ್ತುಹರಿತಪಿಸಲ್ಕೆ ಮೆಚ್ಚಿಶಿವನಿಂತೆಂದನು ॥೩೯॥ ಬಿಡುತಪವನೆಆವಿಷ್ಣುಸಾಕುನಿಂನಿಷ್ಟಮಂ। ಕೊಡುವೆನೀಂಬೆಡೆನಲುಕೊಂಡಾಡಿಭಕ್ತಿಯಿಂ। ಮೃಡಕೇಳುಮತ್ಸ್ಯಾದಿಯಾಗಿದಶಜನ್ಮಮಂತಾಳೆಂದು ಭೃಗುಮುನಿಪನು॥ ಕಡುಮುಳಿದುಶಾಪಮಂಕೊಟ್ಟನಯ್ಯಾಯೆನ್ನಿನಿಂ। ಮಡಿಗಳಿಗೆದೂರವಹುದಲ್ಲದೆಯುಮಾನೆಂತು। ಪಡವೆನೀದಶಜನ್ಮಮಂಕಟ್ಟನೇನುಗತಿಯನಗೆಂದುಹರಿನುಡಿದನು ॥೪೦॥ ಆದೊಡೇನಾಯ್ತುನಿನ್ನಯಪ

ತ್ತಿಮೂರ್ತಿಯುಂ| ಮೇದಿನಿಗೆಹಿತಕಾರಿಯೆನಿಸುವೆಂತಾನೆನ| ಲ್ಕಾ ದೇವ ತನ್ಮೂರ್ತಿಯಿಂದ ಹಂಕರಿಸದೊಡೆ ಬಹುಕಾಲವಿರವೇಳ್ವು ದು॥ ನೀದಯಾಂಬುಧಿಪೇಳೆನಲ್ಕ ಹಂಕರಿಸಿದೊಡೆ| ಛೇದಿಸುವೆನಾ ಠೂಪನದರಕುರುಪೊಂದನಾಂ| ತಾದರಿಪೆನಿಂತುನಿನ್ನಯಮೂರ್ತಿ ಗಳನೆಂದುಕೈಲಾಸಮಂಪೊಕ್ಕನು॥೪೧॥ ಕಾರಣಮಿದೀಗಕೇಳೆಲಿರಾ ಮವಿಷ್ಣುಗವ| ತಾರಮಿವುಹತ್ತಾದವದರೊಳೀಮತ್ಸ್ಯವ| ತಾರವು ದನೀಶ್ವರಂಮೊದಲೆಂದಕ್ರಮದೊಳೀಪರಿಬಂದುಮರ್ದಿಸಿದನು॥ ಈ ರೀತಿಯಿಂಮುಂದೆಹರಿಪುಟ್ಟವಮ್ಮಹಾ| ಘೋರಜನ್ಮಂಗಳಂಪರಿದ ಪಂಶಿವನೆಂದು|ಮಾರಹರನಪರಾವತಾರನಾಚೆನ್ನಬಸವೇಶ್ವರಂನಿರ ವಿಸಿದನು ॥೪೨॥ ಇಂತೆಸವಚೆನ್ನಬಸವೇಶನಪುರಾಣಮಂ| ಸಂತ ಸದಿಬರದವಗೋದಿದರ್ಗರ್ಥ್ಗವಾ | ದ್ಯಂತಮಂಬಿಡದೆಪೇಳ್ದರ್ಗೆ ಪಠಿಸಿದವರ್ಗೆಭಕ್ತಿಯಿಂಕೇಳ್ದವರ್ಗೆ ॥ ಸಂತತಂಸಕಲಸುಖಮಂಸ ಕಲಭೋಗಮನ| ನಂತಸೌಭಾಗ್ಯಮಂಕೊಟ್ಟುರಕ್ಷಿಸುವನಾ| ಕಂ ತುಹರನಪರಾವತಾರನೆನಿಸುವಚೆನ್ನಬಸವೇಶನಕ್ಕರಿಂದಂ ॥೪೩॥

ಎರಡನೆಯಕಾಂಡದಲ್ಲಿ ೧೦ನೇಸಂಧಿಮುಗಿಯಿತು.

## ೧೧ನೇಸಂಧಿ.

ಸೂಚನೆ॥ ದೂರ್ವಾಸನಿಂದೆಸಿರಿಪೋಗಲಮರಾಸುರರು|ಶರ್ವ
ನಾಜ್ಞೆಯೊಳುದಧಿಯುಮ್ಮಥಿಸೆವಿಷಮುದಿಸಿ| ಯುರ್ವಿಜನರಂ
ಕೊಲಲ್ಕಭವನೈತಂದಾಂತುಸಕಲಜಗಮಂಪೊರೆದನು॥

ಪದ॥ ಉಗ್ರಶಶಿಕಾಂತಸಮವಿಗ್ರಹಾವನಿಜಾಪ್ತ|ದಗ್ರಶಕಲಾಧರಸ ಮಗ್ರಮಹಿಮಾರ್ಣವವಿ| ಷಗ್ರೀವನಿಬಿಡಸಮುದಗ್ರಪಿಂಗಲಜಟಾ ಟ್ಯಗ್ರದುರಿತವಿಮರ್ದನ॥ ಉಗ್ರದಾನವಘನತರಗ್ರೀವಖಂಡನಕ| ರಾಗ್ರಧೃತಪಾವಕಶಿರೋಗ್ರಸ್ಥಗಾಂಗಜಲ| ವೆಗ್ರದಿಂದೆಮಗೆಸಮುದ ಗ್ರಘನಚಿರಪದವಕೊಡುಸುಪಂಪಾವಲ್ಲಭ ॥೧॥ ಕೇಳಿನ್ನುಸಿದ್ಧರಾ ಮೇಶಧಿವಿಜೇಶ್ವರಂ| ಕೇಳಿವನದೊಳುಸಕಲದೇವಸುದತಿಯರಸಂ| ಮೇಳದಿಂನಾನಾಪ್ರಪಂಚನವಿನೋದದೊಳುಸುಖಿಮಿದುರ್ತೀಚೆ ಬಳಿಕ| ಘೋಳಿಡುವವಾದ್ಯಸಮ್ಮೇಳದಿಂಸಮದಶುಂ|ಡಾಲಮಸ್ತಕ ದೊಳಲಂಕರಿಸಿಬರ್ಪಸುರ| ಪಾಲಂಗೆಹರನಿತ್ತಮಂದಾರಮಾಲೆಯಂ ದೂರ್ವಾಸಮುನಿಕೊಟ್ಟನು॥೨॥ ಹರಿಯಜಸುರಾಸುರೇಂದ್ರಾದ್ಯರಂ ಕೊಂಬನೇ| ಕರಳಿದೊಡೆದೂರ್ವಾಸಮುನಿಯಿತ್ತಮಾಲೆಯಂ| ಹರಿ ಯುಂಕುಶದೊಳಾಂತುಕುಂಭಕ್ಕೆಸುತ್ತೆಪರಿಮಳಕೆಪರಿಪರಿದೆರಗುವ

ಪರಚಂಚರೀಕಮಂ ಸೋವೃತಾಮಾಲೆಯಂ। ಕರಿನೆಲದೊೞಿಟ್ಟುದಂ
ಮುನಿ ಕಂಡು ಕೋಪದಿಂ। ಹರನಿತ್ತ ಮಂದಾರಮಾಲೆಗಿದು ವಿಧಿಯೆ ಹಾ
ಹಾಹಾಯೆನುತ್ತುರಿದೆದ್ದನು॥೩॥ ಖಳನೆ ಕೇಳ್ಕಾಮಾರಿ ತನ್ನ ಪ್ರಸಾ
ದಮಂ। ದೊಲಿದಿತ್ತನೆನಗದಂ ನಿನಗೀಯೆ ಗರ್ವದಿಂ। ತಳೆಯದಾ ಮಾಲೆ
ಯಂ ಕರಿನೆಲದೊೞಿಟ್ಟೊರಸಿತದರಂತೆ ನಿನ್ನ ಸಿರಿಯು ॥ ಜಲಧಿಯೊ
ಳ್ಕಡಲೆಂದುಗ್ರಕೋಪದೊಳೆ ಮುನಿ। ತಿಲಕನಾಗಳೆ ಶಪಿಸಿದಂ ನಿಮಿ
ಷಮಾತ್ರದೊಳು। ವಿಲಯಮಾದುದು ಸುರಪನೇಳೆ ಪಿರಿಯರವಿರೋ
ಧಂ ಸಿರಿಗೆ ಕಷ್ಟಮಲ್ತೆ ॥೪॥ ಇಂದ್ರನು ತನಶಾಪಮಂ ತಳೆದು ಬಳಿಕಾಗ।
ಜೇಂದ್ರಮಸ್ತಕವನಿೞಿದೈತಂದು ಬಂದಾ ಮುನಿ। ನೀಂದ್ರನಡಿಗೆರಗಿಯೆ
ನ್ನಯ ತಪ್ಪ ಕಾಯೆಂದು ಬಿನ್ನವಿಸೆ ಕರುಣದಿಂಪಂ॥ ಸಾಂದ್ರಸೌಭಾ
ಗ್ಯಮಂ ಕೊಟ್ಟಪಂ ನಿನಗಾಫ, ಣೇಂದ್ರಭೂಷಣನೆಂದು ಮುನಿ ಪೋಗೆ
ದುಃಖಿಸು ಪೇಂದ್ರಾಗ್ರಜಂ ಖೇದವಾರಾಶಿಯೊಳ್ಮಡಿ ಮುಳುಗಾ
ಡಿದಂ ಕ್ಷಣದೊಳು ॥೫॥ ತಡೆಯದೈರಾವತವನೇರಲುಜ್ಜುಗಿಸೆ ಮುಂ।
ನಡಗಿದುದು ಸೇನೆ ಸರಿದುದು ದೇವಕಾಮಿನಿಯ। ರೊಡನೆ ಮೃಗತೃ
ಷ್ಣೆಯಂತಾದರಮರಾವತಿಯ ಸಿರಿ ಕನಸಿನೋಲಾದುದು॥ ಬಿಡದೀಕ್ಷಿ
ಸುತ್ತೆ ಹರಿಶಿವನಂ ಕುರಿತು ತಪಂ। ತೊಡಗಿ ಮುಟ್ಟಿಸಿ ದೈನ್ಯಭಾವದಿಂ ತ
ನಗೆಬಂ। ದಡಸಿದಾಪತ್ತುಮಂ ಬಿನ್ನವಿಸೆ ಕೇಳೀಶ್ವರಂ ಸುರೇಶಂಗೆಂದನು,
ಹರಿಯು ಜಸುರಾಸುರಾದಿಗಳುಮಂ ಕೂಡಿ ನೀಂ। ಶರಧಿಯಂ ಮಥಿಸೆ ಬ
ಪ್ಪುದು ನಿನ್ನ ಸೌಭಾಗ್ಯ। ಮರದೆ ರಚಿಸೆಂದು ಪೇಳ್ದೀಶ್ವರಂ ಪೋದನ
ತ್ತಿತ್ತಲಾಸುರಪಾಲನು ॥ ಹರನಾಜ್ಞೆಯಿಂದೆ ಬ್ರಹ್ಮಾಚ್ಯುತರ್ಗೀ ಹದ.
ನ। ನೊರೆಯಲವರಂದನಾನಾಸುರಸುರಾದಿಗಳ। ಕರೆಸಿಕೊಳಲವರೆ
ಲ್ಲರುಂ ಸಹಿತ ತೀವ್ರದಿಂ ಕ್ಷೀರಾಬ್ಧಿಗೈತಂದನು ॥೭। ಕರಿಯಂತೆ ಧುರ
ದಂತೆ ಪುಷ್ಕರೋದ್ಭಾಸಿತಂ। ಹರಿಯಂತೆ ವಿಧಿಯಂತೆ ಗೋಯುಕ್ತಮಧಿ
ಕಮುಂ। ಧುರದಂತೆ ಮುಖದಂತೆ ವಾಡಬಾನ್ವಿತಮದ್ರಿಯಂತೆ ಪರಮೇ
ಶನಂತೆ॥ ವರಶಿವಾಲಂಕೃತಂ ನಿಧಿಯಂತೆ ನಿಟಿಲದಂ। ತಿರೆ ಶಂಖಶೋಭಿ
ಸನ್ಮುನಿಯಂತೆ ವನದಂತೆ। ನಿರುತಮುತ್ಕಳಿಕಾಪ್ರಸಂಗಿತಾನೆಂದು
ದಧಿಕಂಗೆ ಮಂಗಳವಾದುದು ॥೮॥ ತೀವಿ ರಸಮಯವಾಗಿ ಕಾವ್ಯಮ
ಲ್ತೆ ಪಲ್ಲವಂ। ಗಾವಾಸಮಾಗಿ ವನಮಲ್ತೆ ಸತತಂ ಬಂದು। ಸೇವಿಪಪ
ಯೋಧರಸ್ಪರ್ಶಿತಾನಾಗಿಯುಂ ಪಸ್ಗವಕಸಸ್ತ್ರವಲ್ತೆ॥ ಆವಗಂ ಮಕರ
ಕರ್ಕಟಕಯುತಮಾಗಿರ್ದು। ಭಾವಿಸಲು ರಾಸಿಗಣಮಲ್ತೆ ಮಾರ್ಗಳಿರವಿ
ಗೆಪೇ। ವರಗ್ರಹಮಾಗಿ ನಭಮಲ್ತೆನೆನಿಸಿ ರತ್ನಾಕರಂ ಕಂಗೆಸೆದುದು॥

ಇಂತೆಸೆವದುಗ್ಧವಾರಾಶಿಯಂನೋಡುತ । ತ್ಯಂತಹರುಷಂದಳೆದು
ಮಂದರಾದ್ರಿಯನೆಶಿ। ಳ್ತಾಂತುವಾಸುಗಿಯನೇಣಂಬಿಗಿದುಪಾಲವ
ದನಂಗಳಂಪಿಡಿದುಕೊಂಡ ॥ ಮುಂತೊಗೆದವಸ್ತುವಬುಜೋದರಂಗ
ಹರಸಮ। ನಂತರದೊಳೆಮಗೆತಮಗೆಂದುದೇವಾಸುರ। ರ್ತಂತಂಮೊ
ಳಾಲೋಚಿಸುತೆಕಡೆವಸಮಯದೊಳ್ ರಾಮಕೇಳ್ತಾತುಕವನು॥
ಅಗಜಾಧಿಪಂಗೆಮುನ್ನೊಗೆದವಸ್ತುವನಿರದೆ । ತೆಗೆವೆನ್ನದೆಮಿಕ್ಕ
ದಿವಿಜಾಳಿಗೆಂದೆನಲು । ಸೊಗಸಪ್ಪದೇಮಂದೆಸ್ವರಿಗೆಫಣಿಪನಂ
ದಾಯಾಸವಿಂಕಾರಲು॥ ಧಗಧಗೇಂಧಗಲ್ಕಿಟಛಿಟಲ್ಕಿಟನಿಳಿ । ಲ್ಪ್ಪ
ಗೆಭುಗಿಲ್ಭುಗಿಲೆಂದುಪಿಡಿದದೇವಾಸುರರ। ಮೊಗಮನಪ್ಪಳಿಸಿಭೋ
ರ್ಭೋರೆಂಬರಭಸದಿಂವಿಷವಹ್ನಿಪಸರಿಸಿದುದು ॥೧೧॥ ಓಡಿದಂಹರಿ
ಮರಾಳನಬೆಂಗೆವಾಯುಸ್ತ್ರೈ। ಮಾಡಿದಂಕಮಲಭವಖಗಪತಿಯನೇ
ರಿಸಲೆ । ಯೋಡಿದುದುಭುವಜನಮೆಮಗಾರುಗತಿಯೆಂದುಪುದಿದ
ವಿಷಭೀತಿಯಿಂದಂ ॥ ರೂಡಿಸಿದುದಪಿಳೆದಿಙ್ಮಂಡಲವನಾಗಳೆ । ಲ್ಲಾ
ಡಿಸಿತುಭೂಸ್ವರ್ಗಪಾತಾಳಲೋಕಮಂ। ಕೂಡಿಸಿತುಸಕಲಜನರಂ
ವಿಲಯಗೇಹದೊಳ್ ಕಾಳಕೂಟಂಕ್ಷಣದೊಳ್ ॥೧೨॥ ವರಮುನಿಯ
ಶಾಪಮಂಪಿರಿಯನೀಗಿದಪುರುಳೆ। ಸುರಪತಿಯನುಡಿಗೇಳಿಸುರರಸು
ರರನ್ನೆರಪಿ। ಶರಧಿಯಂಮಥಿಸುವರೆಕೇಡನೆಣಿಸದಿರಲಾಪಾಪಿಗಳೆಭು
ವನಜನಕೆ॥ ಗರಳದುರಿಯುಬಿಳೆಬ್ರಹ್ಮಾಂಡವನುಂಪರ್ವಿಸಂ। ಹರಿಸುತಿ
ದೆಯಕಟಕಟಕಂಡುಕಂಡಿಂತುಪರಿ। ಹರಿಸಲಾಗದೆನೀವುಸೃಷ್ಟಿರಕ್ಷಾ
ಧಿನಾಯಕರೆಂಮಮೊರೆಯಿಟ್ಟರು॥೧೩॥ ಓಡಿದೊಡೆಬಿಡೆವುದೇಂಮು
ನಿಗುದಾಸೀನವಂ । ಮಾಡಿಪೆಯಾನೀಗಿದನಿತಲ್ಗದಕಟಕಟ ಮಾ
ಡಿದೈಶಂಕರದ್ರೋಹಮಂಕೆಡಿಸಿದೈಸಕಲಲೋಕದಜನರನು ॥ ಆಡ
ಲೇನಹುದುಶಚಿಗೂಡಿಭೋಗಿಸುನಿನ್ನ। ನಾಡನೆಲೆಬಾಳೆನೀನೆಂದು
ನೋಟಕಜನಮ। ದೀಡಿರಿದುದಂದುಸುರಪನಗ್ರಮಂಕಾಳಕೂಟ
ಮುರುಪಲುಜಗವನು ॥೧೪॥ ಓಡಿದರ್ಕೆಲರಲ್ಲಿತಮತಮಗೆನಿಂತು
ಮಾ, ತಾಡಿದರ್ಕೆಲರಭವಸಲಹೆಂದುಕೈಗಳಂ । ನೀಡಿದರ್ಕೆಲರಟ್ಟಿಸು
ಡುವವಿಷವಹ್ನಿಯಂಕಾಲ್ಗೆಟ್ಟುದಿಕ್ಕುಗಳನು ॥ ನೋಡಿದರ್ಕೆಲರೋ
ಡುವಮರರಂಕಂಡುಕೆಲರ। ಚಾಡಿದರ್ಕೆಲರೇಳ್ದುಬೀಳ್ದುಬಹುಶೋ
ಕಮಂ । ಮಾಡಿದರ್ಕೆಲರಿಂತುಸಕಲಜಗಮಂವಿಷವ್ಯಾಪಿಸಲ್ಕ್ಷಣ
ದೊಳ್ ॥೧೫॥ ದೇವನೀನಲ್ಲದೀಸುರನರಭುಜಂಗರಂ । ಕಾವರಿಲ್ಲಕ
ಟಕಂಠಗತಾಸುವಾದೆಮ್ಮ। ನೋವಲಾಗದೆನಿರ್ದಯಾಲೋಕವೇಕೆ

ಪಾಲಿಸು ಪಾಲಿಸೈನಮ್ಮನು॥ ಭಾವಿಸದೆನಿನ್ನಪದರಾಜೀವಯುಗಳೆ
ಕ್ಕೆ। ನಾವತಿದ್ರೋಹವುಂಮಾಳ್ದೆವು ಕ್ಷಮಿಸೆಂದು। ದೇವಕುಲವೊ
ರಳಿಲ್ಕೆ ಕೇಳಿದಂ ಶಂಭು ಜಂಭಾರಿಮುಖ್ಯರ ಮೊರೆಯನು॥೧೬॥ ನೊಂ
ದುದು ಸಮಸ್ತದೇವಾಳಿ ವಿಷವಹ್ನಿಯಿಂ। ಬೆಂದುದು ಭುವನಜನವು
ದೀಗಳಾವಿಲಯವೈ। ತಂದುದು ಜವದೊಳಾವು ಪರಿಹರಿಸದೊಡೆ ಸಕ
ಲಲೋಕದಾಟಂಕ್ಷಣದೊಳು॥ ನಿಂದುದು ಸರೋಜಭವಹರಿಗಳ್ಗೆ ಧೈ
ರ್ಯಕಂ। ಬಂದುದಕಟಕಟೆನುತ್ತಮುಸಹಿತವೃಷಪತಿಯು। ನಂದುಧೂ
ರ್ಜಟಿಯೇರಿನಡೆದನಾಕಾಳಕೂಟಪ್ರಚಾರವನೀಕ್ಷಿಸಿ ॥೧೭॥ ಗರಳ
ಭಯದಿಂದೆ ಜಾಯಾರ್ದ್ವರಂ ಚೀರ್ದ್ವರಂ। ಪರಿಪರಿದು ಕಾಲ್ಗೆಟ್ಟುಕೆಡವ
ರಂ ಮುಡಿವರಂ। ಕರದಬಿರುಪ್ರೊಯ್ಲಿಂದನಳ್ದರಂ ಸುಳ್ದರಂ ಬಿಟ್ಟೋ
ಡುವಾಪ್ರಜೆಗಳಂ॥ ಕರಕರದು ಬೇಸತ್ತು ಬಯ್ವರಂ ಸುಯ್ವರಂ। ಸು
ರಪನಂ ಶಾಪಿಸುತಳಲ್ವರಂ ಬೀಳ್ವರಂ। ಹರಸಲಹು ಸಲಹೆಂದುಸುರ್ದ್ವ
ರಂ ದೂರ್ದ್ವರಂ ಚಂದ್ರಚೂಡಂ ಕಂಡನು ॥೧೮॥ ಅಂಜದಿರಿ ಸುರನಿಕರವಂ
ಜದಿರಿ ದನುಜವರ್ಗ। ಅಂಜದಿರಿ ಭುವನಜನವಂಜದಿರಿ ನೋಟಕ। ರ್ಭಂ
ಜಿಸುವೆ ನೀಕಾಳಕೂಟವಂ ನಾನೆನುತೆ ಕರವೆತ್ತಿ ಬಾರೆನಲ್ಕೆ॥ ಅಂಜು
ವವುಹಾಭೀತಿಯಿಂದೆ ನಿಷ್ಠುರವಾದ। ಸಂಜೆಗದ್ದಭವನಂಗೈತಳದೊ
ಳಾಕ್ಷಣಂ। ಮಂಜುಳಿಸುಮಣಿಪರೀಕ್ಷಕನಂತೆ ಶಿವನಿರಲ್ಸಕಲರುಂನು
ತಿಯಿಸಿದರು॥೧೯॥ ಇಂತನೇಕಸ್ತೋತ್ರದಿಂದೆ ಜನಮಿರ್ಪಸಮು। ನಂ
ತರದೊಳ ಭವನಂಗೈತಳದ ಗರಳವಂ। ತಾಂ ತಡೆಯದೀಕ್ಷಿಸಲ್ತನ್ನ ಪ್ರ
ತಿಬಿಂಬವಾ ವಿಷದೊಳಗೆ ಕಾಣಿಸಲ್ಕೆ ॥ ನೀಂತೊಲಗೆನಲು ಪುಷ್ಪದ
ತ್ತಾಭಿಧಾನವುಂ। ತಾಂತಳೆದು ನಿಜರೂಪಿನಿಂದಿದ್ದುದಾಗರಳ। ಮುಂತೆ
ಗದು ಪೋಡೆಗಿಳು ಪೆಜಗಮುಳಿವುದೆಂದು ತೊಡೆದಂ ಸುಗ್ರೀವದೆಡೆಗೆ ॥
ಬನ್ನಿರೈ ಹರಿಯಜರು ಮುಂಕುರಿತವಸ್ತುವೆಮು। ಗೆನ್ನದಿರಲಿಂತಾದು
ದೈಕೇಳಿನೀಂಮುಂದೆ। ಮುನ್ನಿನಂದದಿ ಶರಧಿಯಂ ಮಥಿಸೆ ನಿಮ್ಮಿಷ್ಟ
ವಹುದೆಂದು ಹರನುಡಿದನು॥ ಇನ್ನೇಕೆ ಜೇಯವಿಷವೆಂದೆಮ್ಮನದಿಚ್ಛೆ
ಯುಂ। ಚನ್ನಾಗಿಸಲಿಸುತಿರ್ದ್ದುದು ಸಾಕುಸಾಕೆನಲು। ನನ್ನಿಯಿಂದು
ಮುಂದೆನಾವಿಹೆವೆಂದು ಕರುಣದಿನ್ನುಡಿದು ನಿರವಯವಾದನು॥೨೦
ನಂಬಿದರು ಸಕಲಸುರನರಯಕ್ಷರಾಕ್ಷಸರು। ತುಂಬಿದುದು ಹರುಷರ
ಸಮುವರಂತರಂಗದೊಳು। ತಾಂಬೆದರದಹಿಪತಿಯು ಮುಖಪುಚ್ಛಭಾ
ಗಂಗಳಮ್ಮುನ್ನಿನಂತೆ ಪಿಡಿದು॥ ಶಂಬರಾರಿಯ ಪಗೆಯನೇಮದಿಂದವ
ರೆದು। ಗ್ಧಾಂಬುಧಿಯನುರೆಮಥಿಸಲಾಕ್ಷಣಂ ನವಚಂದ್ರ। ಬಿಂಬಮು

ದಿಸಿದುದು ಶೀತಪ್ರಭೆಯೊಳಖಿಳದೇವಾಸುರರನಳವಳಿಸುತ ॥೨೧॥
ಕುಗ್ಗಿದವು ಜನರಕ್ಕಿಕಾಳ್ಗಳತಿಶೀತದಿಂ। ನೆಗ್ಗಿದವು ಮದನದಹಂಕಾರಂಗ
ಳಾಕ್ಷಣಂ। ತಗ್ಗಿದವು ದಿವಿಜರ ಮನೋರಥ ವಿಷಕ್ಕಧಿಕಭೀತಿಯು ಸಿತಿ
ಲ್ಗವೆಂದು॥ ಸಗ್ಗಿಗರು ದೇವನಂ ಪೊಗಳಲಾಗಳ್ಬಂದು। ವೆಗ್ಗಳಿಪ ಶೀತಕರ
ನೀರೆಂಟು ಭಾಗದೊಳು॥ ಬಗ್ಗದೊವಲುಡಿಯನೊಂದಂ ತಳೆದು ಚಂದ್ರ
ನಂ ನೋಡಿ ಮುತ್ತಿಂತೆಂದನು ॥೨೨॥ ಇಂದು ನೀ ನಿನ್ನೊಳಿದ ಕಲೆಯ
ನೋಷಧಿದೈವ। ಬೃಂದಮಂ ಪೊರೆವುತಂಬರದೊಳಗೆರಡುಲಕ್ಷ। ಮೆಂ
ದೆನಿಪ ಯೋಜನದೊಳಿರುವುದೆಂದು ಭವ ತಾಂ ಕೈಲಾಸಮಂ ಪೊಕ್ಕನು॥
ಅಂದು ದೇವಾಸುರರು ಪರಿತೋಷಮನರಾಗಿ। ಮಂದರದೊಳಾಘ
ಟಿಸಿ ಕಡೆಯಲ್ಕೆ ಪುಟ್ಟಿದವು। ಚಂದಚಂದದ ವಸ್ತುಗಳು ಶಿವನ ಕರುಣಮಿ
ರಲಾವುದಘಟಿತವೆಂಬುದು ॥೨೩॥ ಸಿರಿ ದಿವಿಜಕರಿ ಕಾಮಧೇನು ಕಲ್ಪ
ದ್ರುಮಂ। ಪರಮ ಚಿಂತಾರತ್ನ ಮಮೃತ ಮತಿಚಾಪಳದ। ಸುರಹ
ಯಂ ತಾರೆ ಸುರಕಾಮಿನೀ ಸಂದೋಹ ಧನ್ವಂತ್ರಿ ಮುಖ್ಯರುದಿಸೆ॥ ಸಿರಿ
ಯನಬುಜೋದರಂ ಕೊಂಡು ಮಿಕ್ಕವನೆಲ್ಲ। ಸುರಪತಿಗೆ ಕೊಟ್ಟು ಕ
ಳುಪುವ ಸಮಯದೊಳು ದೈತ್ಯ। ರುರುತರದ ಪೀಯೂಷ ಕಲಶಮಂ ಕೆ
ದ್ದೊಯ್ದರೇನೆಂಬೆನಚ್ಚರಿಯನು ॥೨೪॥ ಕೋಡಿಗುದುಮುನಮುತಿಭ್ರ
ಮೆಯಾಯ್ತು ಬುದ್ಧಿ ಜಟ್ಟೋ। ಡಿದುದಹಂಕಾರಮುಳಿದುದು ಚಿತ್ತ
ಮಿಾ। ಕೂಡಿದಸುರಾಳಿಯುಚ್ಚರು ಹೆಚ್ಚರಿಖಳರಿರ್ದವಸದೊಳಗೆ ಕಾಂ
ತೆಯಾಗಿ॥ ಗಾಡಿಯುಮ್ಮರದು ದೈತ್ಯರ ಕರದ ಕಳಶಮಂ। ಕೋಡಿಯುಂ
ಕೊಂಡವರುಗಳು ಸಹಿತಲೈತಂದು। ನೀಡಿದಂ ಸಾಗರದ ತಡಿಯೊಳೆ
ಮುರಾಸುರರ್ಗಮೃತಹಾದಂ ಪರಿಗಳೆಂ ॥೨೫॥ ಹರಿಯ ಕಪಟವನರಿ
ದು ಸೈಂಹಿಕೇಯಂ ಬಂದು। ಸುರರ ಪಂತಿಯೊಳೊಂದಿ ಕುಳ್ಳಿರಲು ಸುಧೆ
ಯನೀ। ಹರಿಯೆರೆಯೆ ರವಿಹರಿಗಳಿದನರಿದು ಹರಿಗುಸುರೆ ಹರಿ ಚಕ್ರದಿಂ
ದರಿಯಲು॥ ಶಿರಮುಂಡಗಳು ರಾಹುಕೇತುವಾದವು ಪೂರ್ವ। ದುರುವಿ
ರೋಧಂ ಚಂದ್ರಸೂರ್ಯರ್ಗೆ ವರ್ಗೆಯುಂ। ಬರಮಾದುದೀಗಳುಂ ಕೇಳೆಂ
ದು ರಾಮಂಗೆ ಚನ್ನಬಸವಂ ಪೇಳ್ದನು ॥೨೬॥ ಇಂತೆಸವ ಚನ್ನಬಸವೇಶ್ವ
ರಪುರಾಣಮಂ। ಸಂತಸದಿ ಬರದವರ್ಗೋದಿದರ್ಗರ್ಥವಾ। ದ್ಯಂತಮಂ ಬಿ
ಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ॥ ಸಂತತಂ ಸಕಲಸು
ಖಮಂ ಸಕಲಭೋಗಮನ। ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವ
ನಾ। ಕಂತುಹರನ ಪರಾವತಾರನೆನಿಸುವ ಚನ್ನಬಸವೇಶನಕ್ಕರಿಂದಂ

ಎರಡನೆಯ ಕಾಂಡದಲ್ಲಿ ೧೧ನೇ ಸಂಧಿ ಮುಗಿಯಿತು.

ನಖಾಕ್ಷಸರ್ವಾಂಗಿಸುತಮೋಹದಿಂದದೇಂವರ್ಣಿಸುವೆನು ||೬|| ವರಶು
ಕ್ರನೇಮದಿಂದಾದುದಾಗಳ್ನಾಮ|ಕರಣವಿಪ್ರಾಶಂಸುಡಿದೊಲಂಧಕಾ
ಸುರನೆಂದು | ಪಿರಿದಪ್ಪಂದಿವಸದಿವಸಕೆಮಾಸಮಾಸವರುಷಂಗಳಿಗೆ
ಭೀಕರದೊಳ್|| ಸುರಕುಲದವಿಳ್ತು ಬೆಳೆವಂತಖಿಳಮಾಯೆಗಳ್| ಗಿ
ರಿಪೆಚ್ಚುವಂತೆಪಾಪಂರೂಪುವೆತ್ತುಸಂ| ಚರಿಪಂತೆಬೆಳೆವುತಿರ್ದಂಮ
ಹಾಕಾಯನದನೇನೆಂದುಬಣ್ಣಿಸುವೆನು||೭|| ಇಂತಿರಲ್ಕನಕಲೋಚ
ನಹಿರಣ್ಯಕಶಿಪುಗಳೆಂತೀರ್ವರುಂಹರಿವರಾಹನರಸಿಂಹರಿಂ| ಪಿಂತೆ
ಡೆಯುದಳಿದುಪೋಗಲ್ಕಿಳಿಕ್ಕನರವರದೇಶದುರ್ಗಂಗಳೊಳಗೆ|| ಮುಂ
ತೊಪ್ಪವಗ್ರಜಾನುಜಪುತ್ರಮಿತ್ರರಾ| ಮಂತಸೇನಾನಿಸಚಿವಪ್ರ
ಮುಖದಾನವರ| ಸಂತತಿಗಳ್ಶುಕ್ರನೇಮದಿಂದಂಧಕಾಸುರನೆಡೆ
ಗೆನಡೆತಂದುದು||೮|| ಈಜಗಂಗಳೊಳ್ಪೈದೆಪೆಸರಡೆದದಾನವಸ|ಮಾಜ
ವ್ಯೃತಂದಂಧಕಾಸುರಂಗೆಂದಸುರ,ರಾಜಪಟ್ಟಂಗಟ್ಟಿಕೈಮುಗಿದುಕಾ
ಣ್ಕೆಗಳನಿಕ್ಕಿನಿಂದೋಲೈಸಲು || ತೇಜಮುಗ್ಗಳಿಸಿದುದುದಿನದಿನಕ್ಕ
ವಗೆನಾನಾ| ಜಗದೊಳವನಾಣೆಯಾಜ್ಞೆಸಂದುದುಧರೆಗೆಸೋಜಿಗಮ
ದಾಯ್ತುವನೆವರ್ತನಂಸಿಗ್ಗರಾಮೇಶಕೇಳ್ತ್ಕತುಕವನು||೯||ಸೊಕ್ಕಿ
ಡಾನೆಗೆಕೈದುಪಸಿಗಪೊಸಪಾವಿಂಗೆ| ಪಕ್ಕಮುಬ್ಬರಿಪಪೇಬುರ್ಗೆಗೆ
ಧೈರ್ಯಮಂನವತ| ಮುಕ್ಕಕಠಿಣತೆಗಳೊದವಲ್ಕಂತುಟಂತುಟಾಗ್ರೈಶ್ವ
ರಸಹಾಯಮಾ|| ಟಕ್ಕುದಿಕ್ಕಿಂಗೆದಾಳಿಯುನಿಟ್ಟುಮುಲತರಂ | ಪೊ
ಕ್ಕಲ್ಲಿಪೊಕ್ಕುಸಂಹರಿಸುತ್ತೆಸಕಲಲೋ| ಕಕ್ಕೆತನ್ನಾಜ್ಞೆಯುಂಪಸರಿಸಿ
ದನಾಖಿಳೆಂಪೇಳ್ವುದೇನವನಧಟನು ||೧೦|| ಸಪ್ತಾಬ್ಧಿಗಳನೊಂದಿನಂ
ದಾಂಟತನ್ಮಧ್ಯ|ಸಪ್ತಸದ್ವೀಪಂಗಳೆಂಕಟ್ಟಿಕೊಂಡಿಂದ್ರ| ಸಪ್ತಾರ್ಚಿ
ಯಾದಿದಿಕ್ಪಾಲರಂಸದೆದವರಲೋಕಂಗಳಂಸಾಧಿಸಿ || ಸಪ್ತಾಶ್ವಚಂ
ದ್ರವಸುಮನುಗಳಂಬಡಿದುದ್ವಿ| ಸಪ್ತಲೋಕಂಗಳಿಗೆರಾಣೆಯುಮನಿ
ಟ್ಟುವಿಧಿ ಸಪ್ತತ್ರಯಾವತಾರಾದಿಗಳನೆಬ್ಬಟ್ಟಿದಂಖಳೆಂಸಾಮಾನ್ಯ
ನೆ||೧೧||ಗೂಳೆಯುಂತೆಗದುಹರಿಮುಖ್ಯರೆಲ್ಲಬರ್ಂದು| ಪಾಳೆಯುಮನಿ
ಳಿದರಾರಜತಗಿರಿಯೊಳ್ಸ್ವರರ| ಸೂಳೆಯುನೆಲ್ಲರಂಸೆರೆವಿಡಿದುತನಗೆ
ಸರಿಯಿಲ್ಲೆಂದುಬಲ್ಪಿರುದಿನ|| ಕಾಳೆಯುಂಪಿಡಿಸಿಬಲದಿಂಚತುಸ್ಸಾಗರ
ದ|ವೇಳೆಯುಧರಾಮಂಡಲಂಗಳಂಸಂತಸದೊ| ಳಾಳೆಯುಂಧಾಸುರಂ
ತತ್ಖಳೆನಕೀರ್ತಿಮುಜಗದೊಳಗಪಸರಿಸಿದುದು||೧೨|| ಮಾಮರ್ಲ
ವರಿಲ್ಲನೆಲ್ಲೆಲ್ಲಿಯುಂರಕ್ಕಸನ| ದೋರ್ಗ್ರಹನುಮಡಲರಿದುಪಬಿರ್ದು
ದುತಾನಲ್ಲ| ದಾಮರ್ತ್ತದೋರ್ವರೀಜಗಕೊಡೆಯರಿಲ್ಲವೆಂದೇಬಗೆ

ದು ತನ್ನ ಮನದ॥ ಪೇರ್ಮೆಯಿಂ ಮತ್ತತ್ವಮಂ ತಾಳ್ದುಗುತ್ತನೇ। ಸದ್ಯೋ
ಡಿಬಪರ್ಕಾಲದೊಳೊಂದಿಸಂರತ್ನ। ಭವರ್ನಿರ್ಮ್ಮಣವಾಸ್ತ್ಯವದೋ
ಳ್ಬಳಶಿರೋಮಣಿನೋಲಗಂಗೊಟ್ಟನು ॥೧೩॥ ಒವರೋರ್ವ್ವರುಮುಂ
ಬಿಬಂದುದವನೋಲಗಕೆ। ಕಾರೊಡಲಕವಿಮ್ರಾಸೆಗಳಕೆಂಡಗಂಣಹೆಂ।
ಮಾರಿಮೊಗಗಳಬಿಗಿದಹುಬ್ಬುಗಳಬಲುಕೊರದಾಡೆಗಳಸಲಿಕೊಬ್ಬಿ
ದ॥ ತೋರದೊಡೆಗಳತೋಳ್ಗಳೊಳ್ಗಾಂತಕೃದುಗಳ। ಹೇರುರದ
ಹಿಂಗಾಲಬಿರಿದುಹಾಹೆಗಳಹಂ। ಕಾರದುಬ್ಬಿನದಡಿಗರಕ್ಕಸಕೋ
ಟಾನುಕೋಟಿಗಳದೇನೆಂಬೆನು॥೧೪॥ ಮಣಿಪ್ರಾರಣಾರುಣದಕಿರಣ
ದಸುಮಕುಟದಿಂ। ಮಣಿವತನುಜರ್ದನುಜಮನುಜಕರ್ಳಿಂದಾಗ।
ಕುಣಿವಪಾತ್ರಸ್ತೋತ್ರವೇತ್ರಧಾರರ್ಮ್ಮಬ್ಯಸಕಲವಿನಿಯೋಗದಿಂದಂ
ಗಣಿಕೆಯುರನೋಟಚೇಟದಪಾಟವೇಳ್ಗೆಯುಂ, ಭಣಿತೆಯುವಿಧಾವಂತೆ
ಮಾವಂತಸಾವಂತ। ಗಣದಿನೊಪ್ಪುವಸಭೆಗನಾರದಂನೀರವಾಧ್ವದಿ
ನಿಳಿದುನಡೆತಂದನು ॥೧೫॥ ಆಸುರವಾನೀಕ್ಷ್ವರಂಗಿದಿರೆದ್ದರಂಗಿಸಿ।
ಹಾಸನಾಧರ್ಮನಿತ್ತುಕುಶ್ರಿರಿಸಿವಿನಯದಿಂ। ದೇಸುಪ್ರಣ್ಯದಫಲವ್ರಾ
ನಿಮ್ಮದರುಶನವೆಮಗಸಮನಿಸಿತ್ತೆದುಕೊಡೆ॥ ಈಸಭೆಗೆಬರವೆತ್ತ
ಣಿಂದಾಯ್ತುನಿಮಗಲ್ಲಿ ವಾಸವಾವುದುಬಂದಕಜ್ಜವಿಂತೆಂದಂಧ। ಕಾ
ಸುರಂಬೆಸಗೊಳಲ್ಕಾರದಂದಶನದೀಧಿತಿಮಿನುಗಲಿಂತೆಂದನು ॥೧೬॥
ಇಪರ್ವೆಮ್ಮಯುಮನಂಬಂದೆಡೆಗಳೊಳ್ಳೋಗಿ। ಬಪರ್ವುಟನಂಗಪ್ಪ
ದಖಿಳಲೋಕದಕರ್ತೃ। ಸರ್ಪಭೂಷಣನೋಲಗಕ್ಕೆಗಲ್ಕೆತಂದಕಾ
ರಣಿಂನಿನ್ನಭುಜದ॥ ದರ್ಪದಿಂಸೊಂದನಿಮ್ಮಯ್ಯನಂಕೊಂದಕಂ। ದ
ರ್ಪಜನಕಾದಿಗಳ್ಮೊರೆವಿಡಲ್ಕೇಳ್ದುತ। ದ್ದರ್ಪಕಧ್ವಂಸಿತವವಧೆಗಬರು
ತಿರಲುಸುರಬಂದೆವಗುಸದನೆಂದನು॥೧೭॥ ಕೇಳ್ದುಗಹಗಹಸಿಕು
ನಮೊಗಂನೋಡಿಜಗ। ಗಾಳ್ಗನಿನ್ನೋರ್ವನಿರ್ದಪನೆಂಬುದಂನಮ
ಗೆ। ಪೇಳ್ವುದಲ್ಲಿಂದುವರೆಗಂಭಾಪುನಿಮ್ಮನೇನಂದಪೆವುನ್ನತಪಿತನಂ।
ಸೀಳ್ದನಂಮರೆಬೊಗಿಸಿಕೊಂಡೆಮ್ಮಮಂಕೊಂದು। ಬಾಳ್ದಪನಪೆಸವ
ದೇನಿನ್ನೊಮ್ಮೆನುಡಿಯೆನುತೆ। ನೀಳ್ದನಿಟ್ಟುಸುರಹೊಂಕೃತಿಹೊಗ
ಯೆನಾರದನೊಳಂಧಕಾಸುರನಿಡಿದನು॥೧೮॥ ಉಸುರುವರೆಹರಿಯು
ಜಾದ್ಯರುನಮ್ಮದೂರನಾ। ಮಸಣಗಾಹಿಗಬೊದಿಬಡಕನಾಮೊರೆ
ಯನಾ। ಲಿಸಿದನೇಪೆಂಗೂಸುಮೈಯುಮಂಮುಳಿದುತಾನೆಮ್ಮಮಂ
ಕೊಲಲ್ಬಪ್ಪುದು॥ ಹಸನಾಯ್ತುದಿಗ್ವಿಜಯದೊಳುಗೂರವನೆಂದು
ಪಾ। ಲಿಸಿದೆವವನೇಜಗತ್ಕರ್ತ್ತುಗಡವೆನುತಾಗ। ಲಸಮದಾನವನಿರವೆ

ಮಸಗಿಕಡುಕೋಪದಿಂದೊಡನೊಡನೆಗರ್ಜಿಸಿದನು ॥೧೯॥ ಗರ್ಜನೆ
ಯುದನಿಗಖಿಳಲೋಕದಜನಂಬೆರ್ಚಿ। ನಿರ್ಜೀವವಾಯ್ತು ಮುನ್ನೊಂ
ದು ಹರಿವಿಧಿಮುಖ್ಯ। ನಿರ್ಜರರು ಕಂಗೆಟ್ಟು ಸರಕುಗಳನಡಕಿದರ ಬ್ರ
ಹ್ಮಾಂಡದೊಳಂಟಯುದಿರೆ॥ ಜರ್ಝರಿಸಿದಂ ನಾರದಂ ಬೆರಗುವಟ್ಟವನ।
ನಾರ್ಣಯಿಪರೆಂದುಸುರಿದಂ ಬಳಿಕಾ ಮಹಾ। ದುರ್ಜನಂ ಶತಮಾ
ಯನೆಂಬಸೇನಾನಿಯಂ ಕರೆದು ಮತ್ತಿಂತೆಂದನು ॥೨೦॥ ಬರಹೇಳ್ನಿ
ಕುಂಭನಂ ಶುಂಭನಂ ಜಂಭನಂ। ಬರಹೇಳ್ಸುಶಬಲನಂ ಪ್ರಬಲನಂ ಸುಲ
ಬನಂ। ಬರಹೇಳ್ಪ್ರವೀರನಂ ಘೋರನಂ ಶೂರನಂ ಬರಹೇಳ್ಮಹಾನಾ
ಭನಂ॥ ಬರಹೇಳ್ನಿಶುಂಭನಂ ಕುಂಭನಂ ಲಂಬನಂ। ಬರಹೇಳ್ವಿಪುಳ
ನಂ ಚಪಳನಂ ಕಪಿಲನಂ। ಬರಹೇಳ್ಕುಂಡನಂ ಮುಂಡನಂ ಚಂಡ
ಮುಖ್ಯರನೆನುತ್ತುರಿಬೆದ್ದನು॥೨೧॥ ಪೊಡಸು ಭೇರಿಯನಿಂದೆ ನಡೆಸು
ಮತ್ಸೈನ್ಯವಂ। ಬಿಡಿಸು ಪಾಳೆಯವನೆದೆಗೆಡಿಸು ಗೋಳಿಯಮನುರ್ಕಿ।
ಪಿಡಿಸಮರರೋಳಿಯಂ ಕಡಿಸು ಮಾತಾಳಿಯಂ ಕುಡಿಸು ನೆತ್ತರ ನೊ
ಡಲ್ಗೆ॥ ಅಡಸು ಹರಿವಿಧಿಗಳಂ ಬಡಿಸು ಮೂವಿಧಿಗಳಂ। ಸುಡಿಸು ಕೈಲಾ
ಸಮಂ ಕೆಡಿಸು ಸರಸಾಸಮಂ। ತಡೆಸದೇ ನೀಂ ದಾಳಿಯಿಡಿಸು ಬೇಗ
ದೊಳೆನುತ್ತೊಡನೊಡನೆ ನೇಮಿಸಿದನು॥೨೨॥ ಅನಿತರೊಳ್ಕಂಡಂ
ಪ್ರಹ್ಲಾದನಿವನಮನ। ದನುವನಾಯ್ತಾಯ್ತು ಹೋಹೋ ಸಾಕು
ಸಾಕಿದೇಂ। ಘನತೆಯಾರೊಳ್ಕಲಹಮತ್ತೆಗ್ಗದಾಳಿ ಶಿವಶಿವ ಪಿಂದು
ಮುಂದೆಣಿಸದೆ॥ ಇನಿತುಬ್ಬವರೆ ಬಲ್ಲವರ್ತರ್ಮ್ಮ ಬಾಯಹವ। ಣನಿ
ತುತ್ತನುಂಬುದೊಳ್ಗಿತು ಶಿವನದಾನಿರ್ನ್ನ। ಜನನಮಾರಿಂದಾಯ್ತು
ಕೇಳ್ಶುಕ್ರನಂ ಬರಿದಬೆಮೊಗೊಳ್ಬೇಡೆಂದನು ॥೨೩॥ ಪರಶಿವನಶ
ಶಿಸೂರ್ಯನೇತ್ರಂಗಳಂ ಗಿರಿಜೆ। ಸರಸದೊಳ್ಮುಚ್ಚೆ ಮುಂಪೆಟ್ಟಲೋಕಸಂ
ದುರಿಗಣ್ಣಿನಿಂ ಬೆಳಕುದೋರಲಾತಮದಳವಿನೊಳಗೆನೀಂ ಜನಿಸಿ ಶಿವ
ನ॥ ಪೊರೆಯೊಳಳುತಿರೆ ಶಿವಂ ಕಂಡು ಕನಕಾಕ್ಷನುರು। ತರತಪಸ್ಸಿಂ
ಗೊಲಿದು ನಿನ್ನನಿತ್ತಂ ನಿನ್ನ। ಗುರು ಶುಕ್ರನಂ ವಿಚಾರಿಸು ತೋಳ್ಗಳುರೆ
ಬೆಳೆಯಲಾರನಪ್ಪುವಿಯೆಂದನು॥೨೪॥ ಶಿವಮಹಿಮೆ ಬಣ್ಣಿಸು ಪೊಡಳ
ವೆ ಕೇಳ್ಮನ್ನಬ್ಜ। ಭವವಿಷ್ಣುಗಳ ಸಮರವಂ ಬಿಡಿಸಲುರುಲಿಂಗ। ಮು
ದಿತರಿಸೆ ಶೀರ್ಷಪದವಂ ಕಾಣ್ಬೆವೆಂದು ನೇಮಿಸಲೋರ್ವರುಂ ಕಾಣ
ದೆ॥ ಬವಣೆಯೊಳ್ತಿರುಗಿಗರ್ವಮನುಳಿದರಾಕಮಲ। ಭವನಿರುತಿರು
ತ್ತ ಹಂಕರಿಸೆ ರುದ್ರನ್ನಗು। ತ್ತವನ ತಲೆಯಂ ಚಿವುಂಟದನುಗುಗೋರ್ನೆ
ಯೊಳಾಬ್ರಹ್ಮನೇಂ ಸಾಮಾನ್ಯನೇ॥೨೫॥ ಕಾಲನಂ ಕಾಮನಂ ತ್ರಿಪು

ರವಮಂ ನೆಗಸಲಕೆಂ | ಗಾಲಿಯುರಿಯಿಂ ಸುಟ್ಟನುಗ್ಘವಸಿದೇಳ್ದನದ|
ಬಾಲನಿಂ ತಾರಕನನುರೆ ಕೊಲ್ಲಿಸಿದಂ ಕೊಂದನಾ ಜಲಂಧರದೈತ್ಯನಂ||
ಕಾಲುಂಗುಟದಿನವನಿಯೊಳ್ಬರೆದ ಚಕ್ರದಿಂ| ಪೇಳಲೇಂ ಶ್ರುತಿಚೋ
ರತಮನೆಂಬ ಸಂಕೊಂದ | ಮೇಲಖಿಳಮತ್ಸ್ಯರೂಪಂ ಸೀಳ್ದನಂತಿಪೆ
ಸರ್ಗಮಾನ್ಯರೇಯೆಂದನು||೧೬|| ಪೂರ್ವಮಂತಿರಲತಿಪತಾಪರೆಂ
ಮುಯ್ಯಂಗ| ಕೀರ್ವರಂ ಸೀಳ್ದುಮುಹಾವಿಷ್ಣುವಿನದೊಂದು|ದೋರ್ವ
ಲಮನರಿವೆಯೋ ತತ್ತ್ರಿಂಶಕ್ರೀಡಾವತಾರಂಗಳವನಿಯೊಳಗೆ|| ಗರ್ವಿ
ಸಲು ಹರನಾ ವರಾಹನಂ ಸೀಳ್ದುಮು|ತ್ರೋರ್ವಮುಗನಿಂ ಸಿಹ್ಮಮಂ ಕೊ
ಲಿಸಿದಂ ಶಿವಂ | ಸರ್ವಥಾ ದುಷ್ಟನಿಗ್ರಹ ಶಿಷ್ಟಪಾಲಕನೀಂ ತಿಳಿದುಕೊ
ಳ್ಳೆಂದನು||೧೭|| ಎವೆಯಾಟದಿಂದಖಿಳ ಬ್ರಹ್ಮಾಂಡಮುಳಿದುದಿಸು|ವ
ವು ವಿಷ್ಣು ಬ್ರಹ್ಮೇಂದ್ರರುಂ ಭೃತ್ಯರಗ್ನಿ ಶಶಿರವಿಗಳಕ್ಷಿಗಳವನಿ ಜಲ
ವಹ್ನಿ ಪವನ ಗಗನಾತ್ಮಾರ್ಕ ಶಶಿಮುಖ್ಯರು || ಶಿವನಷ್ಟಮೂರ್ತಿಗಳ್ಸ
ರ್ವಕೆಲ್ಲಂ ಸಗಾ | ಶಿವಮಯಂ ನೀನದೇತಕೆ ಮರುಳ್ಗೊಂಬೆ ಬಾ | ಶಿ
ವಚರಣಮಂ ಕಂಡು ಬಗುಕಲಿಸಪರಸೌಖ್ಯಮುಪ್ಪುಟದು ನಿಜವೆಂದ
ನು ||೧೮|| ಕೇಳಿ ಕಿಡಿಕಿಡಿಯಾಗಿ ಬಾಯ್ದೊಡ್ಡಿತೆಂದೆನ್ನ | ನೂಳವೆ
ಯುಮಾಡಿದಾರ್ಕರೆದರೇ ನಿನ್ನನೀಂ | ಪೇಳಿದ ಹರಿಬ್ರಹ್ಮ ಮುಖ್ಯ
ರೆಂನ್ನಿಂದಲೇನಾದರೆಂಬುದನರಿಯ ಬಾ || ಆಲೋಕಮನಿತನೆನ್ನ
ಯುಭೃತ್ಯಸಂದೋಹ | ಮಾಳ್ಕುತಿರಲಾ ಹರನದೇಗೈದನೆಲವೊ ಫ
ಡ | ಖೂಳ ಕೂಗದೆ ಕೇಳಕೆನಾರೆಂದು ತನ್ನವರ ಮೊಗನೋಡುತಿಂತೆಂ
ದನು||೧೯|| ಊರೊಂದೆರಳ್ಮೂರ್ಗಳಂ ಸುಟ್ಟನಂತೆ ಬಡ | ಹಾರುವನ
ತಲೆಯುಂ ಚಿವುಂಟದಂಗಡ ಪೊಕ್ಕು|ನೀರೊಳಗಣೊಂದು ಮೀನಂ ಸೀಳ್ದ
ನಂತೊಂದು ಪಂದಿಯಂ ಕೊಂದನಂತೆ|| ಬೀದಪಿಂಪರೆಮಾನಿಸನನಿರಿದ
ನಂತೆ ಬಡ| ತಾರಕಸ್ಮರಕಾಲರಮುಮ್ಮುರಿದನಂತವನ| ವೀರಮಂ ಕಾಂ
ಬೆನೀಂ ಪೊಯ್ಸು ಭೇರಿಯನು ತತ್ಸ್ಥಾನದಿಂದೆದ್ದನು ||೨೦|| ದಂದಣಾದ
ಣಧಳಧಳಂ ಧಳಧ್ವನಿಗದಿ | ಕ್ಪಂಡಿಗಳ್ಪಡಿಲಲಾ ಫಣಿಪದಿಕ್ಕರಿಗಳಶಿ|
ರಂದಿಮ್ಮನುತ್ತ ಕಿವುಡೆಸೆಯಲಾ ಕುಲಪರ್ವತಂಗಳ ಧರಾಚಕ್ರದ||
ಬಂಧನಂಗಳ ಬಿಗುವ್ರಬಿಡೆ ಕಲಕಲಂ ಸಕಲ | ಸಿಂಧುಗಳ್ತರಣಿಶಶಿಗಳ್ಪ
ರಣಗೆಡೆ ಜಗದೊ|ಳಂಧಕಾಸುರನ ಭೇರೀರವಂ ಪೊಣ್ಮಿದುದನೇನೆಂಬೆ
ನದ್ಭುತವನು||೨೧|| ಪೊಯಿಸು ಘನಭೇರಿಯಂ ಭಾಪಯುಂತಕ್ಕಮು|
ಟ್ಟಯಿಸಲ್ ಚತುರ್ಬಲಂ ಸರ್ಬಲಗ್ಗೆಯೊಳೆಂಬ | ಕಯಿಸನ್ನೆಯೊಳ್ಮ
ನ್ನೆಯರ್ಮಂಡಲೀಕಸಾಮಂತಸಚಿವಪ್ರಮುಖರು|| ಅಯಿಸುದಾನವ

ಪಮಾನವರ್ಕಳ್ದನಕರ್ಕಶದ। ಮುಯಿಸಿರಿಯುರಾವ್ರತವರ್ಪೃತಬರ್ಳಸಿವೇ। ಡಯಿಸಿಬರಲಂದಂಧಕಾಸುರಂಪೊರಮುಟ್ಟುಪೊರಬೀಡನುರೆಬಿಟ್ಟನು॥ ೨೨॥ ನೆಗಳಿದವುವಲ್ಲಲ್ಲಿಮುಯುಕ್ತತದೊಳಾಗಬಗೆ। ಬಗೆಯುಗುಡಿಗುಮುರಿಗೂಡಾರಸಾಗರದಾನ। ಮಗಲದೋಳಾಬ ವಡಿಹಜಾರಸಯುಗಜಶಾಲೆಮುಖ್ಯಬೀಡಾರಂಗಳು। ಗಗನವಾದುದೋ ನೆಲಂಬೆಸನಾದುದೋ ನಿಖಿಳ। ಜಗವುದಂಪೆತ್ತುದೋ ಜಡಧಿಪಡೆದುದೋ ಬಲಮಿ। ದಗಣಿತಮೆನಲ್ಪೊರಮುಡುತ್ತಿರ್ದುದೂರೊಳಗಣಂದದೇಂವಣಿಸುವೆನು॥ ೨೩॥ ಕುಲಗಿರಿಗಳೋದ್ಧಿಶಾಕರಿಗಳೊಳ್ಬಬ್ಬಿಭರ। ಕಿಳೆತಗ್ಗೆಸುರಿವಮೊಲ್ಕೀಳ್ತಬಜಲಂಕಾರ। ಮುಳೆಗಾಲಮೆನಿಸಿಘನಕರ್ಣತಾಳಾನಿಲಂಬೆಟ್ಟಗಳನಲ್ಲಾಡಿಸೆ॥ ಚಳಿಪಕದಳಿಯುದಳೆದಮಾರುತಂರವಿಘರ್ಮ, ಜಲವನಾರಿಸಿಮಿಯುಗ್ಗಂಗೋದಕಮನೂದಿ ಕೊಳುತನಡೆತಂದತ್ತುಶುಂಡಾಲಸೈನ್ಯಮದನೇನೆಂಬೆನದ್ಭುತವನು ॥ ೨೪॥ ವರಮುರುಚ್ಛ್ರದೃಷ್ಟಿಮನದಬೇಗಂಗಳೆಂ। ತ್ವರಿತದೋಳ್ಪಿಂದೆನಿಸುತಾಯುತದೊಳಿಂದಾರ್ಕ। ಹರಸಬಾಣ್ವಂಗಳೆಂಕೀಳ್ಪಡಿಸುತಂಬರಕೆಲಂಘಸುತ್ತವನಿತಳೆವಂ ॥ ಖುರಪುಟಂಗಳೊಳ್ಕೆರವುತಕಡಿವಕಬ್ಬಾನದ। ಘುರುಘುರುಧ್ವನಿಹೇಷಿತಸ್ವನಂಕಟನಾಯು। ನೊಗೆರನ್ನವಕ್ಕರಿಕೆಗಳ್ಕ್ರೆರೆಯೆಬಂದತ್ತುತುರಗಬಲವೇನೆಂಬೆನು ॥ ೨೫॥ ತೊಳಪಮಣಿವೆಳಗಿನಿಂಚಕ್ರದಿಂನಭದೊ ಳಿಳಿಯೆೋಳ್ಪಡಿತ್ತಿಂಜಿನೋಳ್ಪೊಳೆದುವೊಳಗುತಿಹ। ಫಲವಾಜಿರಾಜಿಯಿಂಸೂತಹೂಂಕೃತಿಗಳಿಂದೃಢಶಸ್ತ್ರಜಾಲದಿಂದಂ॥ ಪಲತೆರದಕೇತನಂಗಳಕುರುಪಿನಿಂಸಿಲ್ಲ। ದುಲಿವಘಂಟೆಯುಧಣತ್ಕೃತವೊಗಯುಬಂದತ್ತು। ನಳಿನಸಖಸುರಪುರರಥಂಗಳೆಂಕೀಳ್ಪಡಿಸಿರಥಸೈನ್ಯವೇನೆಂಬೆನು॥ ೨೬॥ ಪಿಡಿಟೆರಳ್ಪತ್ತಿಗಗಳೆರಡೆರಳ್ಬವರಗಳೆ। ನಡುವಗಪ್ಪಂಜುಗಳಡಾದೆಜೇಗಟೆಗಳಾ। ಕಡುಬಿರುದುಗಳಜಿಂಕಬಿಂನಡೆದುಲಾಗಿಸುತ ಹೂಂಕರಿಸಿತೋಳ್ಪೊಯ್ವುತ ॥ ಕಡುಗಖೇಟಕಸಬಳಹೇರಿಟ್ಟೆಕತ್ತಿವಂ। ಕುಡಿಪರಶುತೋಮುಗದಾದಿಯಾಯುಧಮುನುರೆ। ಜಡಿವುತ್ತಸಿಡಿಲಬಳೆಗಂಗಳೆನೆಬಂದುದುಪದಾತಿಬಲವೇನೆಂಬೆನು॥ ೨೭॥ ಮತ್ತಗಜಘಟೆಗಳೊಂದೊಂದುಪದ್ಮಂಗಳ। ತ್ಯುತ್ತಮವರೂಥಂಗಳೈದುಪದ್ಮಂಕುದುರೆ। ಹತ್ತುಪದ್ಮಂಗಳ್ಪದಾತಿತಾನಿಪ್ಪತ್ತುಪದ್ಮವೋರ್ವನಬಳಿಯೊಳು॥ ಸುತ್ತಲೋಲೈಸುತಿಹುದಿಂತಪ್ಪದೊರೆಗಳೆಂ। ಬತ್ತೆಂಟುಕೋಟಿವೊದಗರಂಧಕಾಸುರಂ। ಗಿತ್ತಲಿದರನಿತಾದಬಲವದೆಲ್ಲಂಬಂದುದಾಕ್ಷಣ

ದೊಳೇನೆಂಬೆನು ॥ ೩೮ ॥ ಕೆಳದಿಯರ್ಸುತ್ತಿ ಬರುತಿರೆ ರಾಣಿವಾಸದಂ ದ
ಳಿರನ್ನಪಲ್ಲಕ್ಕಿ ಪೆನ್ನಂಗಗಳ್ಮುಟ್ಟಿ ತಳೆದವಗಣಿತಮಾನೆಕುದುರೆಗಳ
ಮೇಲೆ ಮೇಲ್ಮುಸುಕಿನಿಂ ಕೆಲಕೆಲಬರು ॥ ಬಳಿಕ್ಕೈದಲಿತ್ತ ದಂಡಿಗೆಮಂ
ಚವಲ್ಲಕ್ಕಿಗಳನಡರ್ದ್ದತ್ತು ಕುದುರೆಗಳೇರಿಯಾಳಿಯರ್ ಬಳಸಿಬರೆಬಂ
ದತ್ತು ವಾರಾಂಗನಾನಿವಹವೋರಂತೆ ಸಂಭ್ರಮದೊಳು ॥ ೩೯ ॥ ಬಂ
ಡಿಯೊಳ್ಕನಕಭೂಷಣವಸನಪರಿಮಳದ । ಭಂಡಾರಗಳ್ಬರಲು ಘೃತ
ತೈಲಮುಖ್ಯರಸ । ಭಾಂಡಂಗಳಖಿಳಧಾನ್ಯಂಗಳುಂ ಪೇರ್ವೆತ್ತುಗಳ
ಮೇಲೆ ಬರೆ ತಾಮ್ರದ ॥ ಭಾಂಡತತಿ ಪೊಂಬೆಳ್ಳಿಗೊಪ್ಪರಿಗೆ ಕೊಡಪಾನ ।
ಗಿಂಡಿ ಪರಿಯಣ ಪಡಿಗ ಮಂಚಮುಂ ಸುಪ್ಪತಿಗೆ । ಮಂಡೆಮಲಗುಗಳ
ಡ್ಡೆವರೆಯಾಳ್ಗಳಿಟ್ಟಣಿಸಿ ನಡೆತಂದುದೇಂ ವೇಳ್ವೆನು ॥ ೪೦ ॥ ವಾಣಿಯ ಚೆನ್
ನ್ನವರದರ್ಪ್ಪಿಸಿಗರ್ಮುತ್ತು । ಮಾಣಿಕದಪರದರ್ಪ್ವಣಿಗ್ವರರ್ಗಂಧಿಗ । ರ್ಪ್ಪಾ
ಣಸರ್ತ್ತಂಬೂಲಿಗರ್ಮ್ಮಲೆಗಾರರಾ ಪಾಲ್ಮೊಸರಮಾರುವವರು ॥ ಗಾಣ
ಗಚೆರ್ಂಪಿಗರ್ಮ್ಮಟ್ಟಿಗರ್ಬೋರ್ನಳಿಕ । ರ್ಪ್ಪಣಿಗರ್ಕ್ಕಲಸಿಗರ್ಮ್ಮಡಿವಳರ್ಬಿರ್ಸಿನೀ
ರ । ಕೇಣಿಗಜೂರ್ಜುಗಾರರ್ಮ್ಮುಖ್ಯರೊದಗಿ ಬರುತಿರ್ದರೇಂ ವಣಿಸುವೆ
ನು ॥ ೪೧ ॥ ಕೊಡತಿ ಗುರ್ದ್ದಲಿ ಹಾರೆ ಮುಚ್ಚುಗುಡು ಗೋಲವ । ಕೊರ್ಡನೀ
ರ ಕೊಟ್ಟಣದವರ್ಕ್ಕಸಂಗಳನಿರದೆ । ಗುಡಿಪ ಕೂಲಿಗಳವರ್ಬಳಿದೊಡಿಪ
ಕುಂಟಣಿಯ ನಡೆಯಿಸುವ ಮುದಿಪೆಂಗಳು ॥ ಅಡೆ ಗೂಳೆವರ್ದ್ದೋಸೆಕ
ಜ್ಜಾಯ ರೊಟ್ಟಿ ಹೊಯಿ । ಗಡುಬತಿರಸಂಗಳುಪ್ಪಿನಕಾಯಿ ಹುರಿಮಣಿ
ಸು । ಗಡಲೆ ಸಕ್ಕರೆ ಕುಂಠಿಕಬ್ಬುವಿಲ್ಲೆಗಳನುರೆ ಮಾರುವರ್ಬರುತಿರ್ದ
ರು ॥ ೪೨ ॥ ಕವಿ ಗಮಕಿ ವಾದಿ ಗಾಯಕ ವಾಗ್ಮಿ ನಟ ಪಾಸ್ಯ । ದವರಾದಿ
ಚೌಷಷ್ಟಿಕಲೆಯುವರ್ಲ್ಲೇಖಕ । ವ್ಯವಹಾರಕೃಷಿ ಬುದ್ಧಗೋಪಾಲಯಾ
ಚ್ಕಂಗಳೆನಿಪ ಷಟ್ಕರ್ಮದಿಂದ ॥ ತವೆ ಜೀವಿಪಷ್ಟಾದಶಂಗಳೆಂದೆನಿಪಜಾ ।
ತಿವಳೆವರ್ಸ್ನರೊಂದು ಕುಲದವರ್ತ್ತಂತಮ್ಮ । ಹವಣಿನುದ್ಯೋಗಂಗ
ಳಿಂದಖಿಳಲೋಕದ ಜನಂ ಕೂಡಿ ಬರುತಿರ್ದ್ದರು ॥ ೪೩ ॥ ಕುದುರೆಗಳಜೀ
ನಹಲ್ಲಣ ತೀವೆ ಕಬ್ಬಿಕಂ । ದದಹಕ್ಕರಿಕೆ ಚಬುಕು ಮೊಗರಂಬ ವಾಘೆಗ ।
ಳ್ಮದಗಜದ ಹೊರಜೆ ರಂಚಿಕೆ ಗುಳಂ ಘಂಟೆ ಸರಪಳಿ ಮಿಳಿಗಳಾದಿಯಾ
ಗಿ ॥ ಪುದಿದ ಪರಿಕರವ ಸವರಾವ್ತಮಾವ್ತರ್ಕಳಿಂ । ಗದಜೋಡು ವ
ಜ್ರಾಂಗಿ ಕೊಳಗ ಸೀಸಕ ಭುಜಯು । ಗದರಕ್ಕ ಸೂಡಾಯ ಕೈದುಗ
ಳ್ತುಂಬಿ ಭಂಡಿಗಳಗಣಿತಂ ಬಂದವು ॥ ೪೪ ॥ ಹುರಿದ ಪೊಸ ಭಂಗಿ ಹದಗೈದಪಿ
ನಿಕೂಟ ದೋ । ಳ್ಬೆರೆದ ಮುಲಜಾಜಿ ಕಾಯ್ಪತ್ರೆ ಕಸಕಸೆಯೆಂಬ । ತರ
ತರದೊಳೆಸೆವಲಹರಿಗಳುಮಲ್ಲ ಪಕ್ಷಿಮೃಗಕುಲದ ಮಾಂಸಂಗಳು ॥

ಸುರಿಬಗಿನಿಯಿಸಾಚಲೋಲೆಯುಮುರಗಳಾದಿಮು| ತ್ತಿರದೆಸೆವಗೆಂಗಸಾಗ
ರಮುಂಖ್ಯರಕ್ಕಸರ| ಪರಿಪರಿಯ ಭೋಜನದ್ರವ್ಯಂಗಳಿಡಿದಭಂಡಿಗಳ್ಕೈ
ದೆಬರುತಿರ್ದವು||೪೫|| ತಪ್ಪಿದೆತ್ತೆಂಮುತೊತ್ತಿರ್ಕ್ಕಳೆಂಕೂಗು| ದಪ್ಪ
ದರಸು ತಹೇರ್ಗಳೆಂಬಿಸುಟಹೋರಿಗಳೆ| ಚಪ್ಪರಣೆಯಿನ್ನಿಳಿಸಿಮೂ
ಗುನೇಣಡು ತಹೇರ್ಗಳಹೊಳಿವುತೋಸರವಟು|| ಅಪ್ಪಿನೆಗಪುತ್ತೆ ಸ
ತಿಯನ್ನಡೆಸುತತಿಭಾರ| ಮುಪ್ಪಸೊರೆಗಳನಿಳಪುತಲ್ಲಲ್ಲಿನಿಲುತಕೆ
ಡು| ಮುಪ್ಪಜವ್ವನಗನಾನಾತೆರದಸದಳಿಗರ್ನಡೆದುಬರುತಿರ್ದರಂ
ದು||೪೬|| ಅಂತು ನಡೆತಂದು ನೆಲದಗಲದೊಳ್ಬಿಟ್ಟುದುತ| ದಂತರದೊ
ಳಿನನಪರಮಾರ್ಥಿಗಳಿದಂತಮುಂ| ಮುಂತಾದನಿಶಿಚಿಹ್ನ ಮುಗ್ಧವಾಸಂ
ಜೆವರೆಮೊಳಗಿದವು ಪಾಳೆಯದೊಳು|| ಕಾಂತಿಯಿಂದೆಸದವಗಣಿತದೀ
ಪಮಲ್ಲರುಂ| ಸಂತಸದೊಳುಂಡೊರಂಗಿರೆ ಪೂರ್ವಗಿರಿಯುಶಿಖ| ರಾಂತ
ರದಪದ್ಮರಾಗದಕಳಶಮೆಸೆಸೂರ್ಯಮಂಡಲಂರಾಜಿಸಿದುದು ||೪೭||
ಇಂತೆಸೆವಚೆನ್ನಬಸವೇಶ್ವರಪುರಾಣಮಂ| ಸಂತಸದಿಬರದವರ್ಗೋದಿ
ದರ್ಗರ್ಥಸಾ| ದ್ಯಂತಮಂಬಿಡದೆಪೇಳ್ದರ್ಗೆ ಸರಿಸಿದವರ್ಗೆ ಭಕ್ತಿಯಿಂಕೇ
ಳ್ದವರ್ಗೆ|| ಸಂತತಂಸಕಲಸುಖಮಂಸಕಲಭೋಗಮುನ| ನಂತಸೌಭಾ
ಗ್ಯಮಂಕೊಟ್ಟುರಕ್ಷಿಸುವನಾ| ಕಂತುಹರನಪರಾವತಾರನೆನಿಸುವ
ಚೆನ್ನಬಸವೇಶನಕ್ಕರಿಂದಂ ... ... ... ||೪೮||

ನಾಲ್ಕನೆಯಕಾಂಡದಲ್ಲಿ ೭ನೇ ಸಂಧಿಮುಗಿದುದು

ಅಂತು ಸಂಧಿ೪೭ಕ್ಕಂ ಪದ ೧೯೪೦ಕ್ಕಂ ಮಂಗಳ.

## ೮ನೇಸಂಧಿ

ಸೂಚನೆ|| ಸರ್ವಸನ್ನಾಹದಿಂದಂಧಕಾಸುರನಿರದೆ| ಶರ್ವೇ
ಶ್ವರನಮೇಲೆದಂಡೆತ್ತಿಬರೆಕೇಳ್ದು| ಶರ್ವನತಿಕೋಪದಿಂದಾಖ
ಳನಸಂಹರಿಪಲೀಲೆಯಿಂನಡೆತಂದನು||

ಪದ|| ಅಸಮಾಕ್ಷನತಪಕ್ಷ್ಮಲಸದಮಳಹಸ್ತಧೃತ| ವಸುವಿಶದಶ
ಶಿಕಾಂತಸುಸಮಸರ್ವಾಂಗಗ| ರ್ವಿಸಿದಖಳದಾನವಪ್ರಸರಾಭ್ರನಿರಸ
ನಶ್ವಸನಮರುದಶನಭೂಷ|| ಅಸಿತಗಳಭಸಿತದರಹಸಿತಮುಖಲಸಿ
ತಸುಖ| ಸಸಿದಳಿಯುಬಿಸಿಗಣ್ಣಪಂಪಾವಿರೂಪಾಕ್ಷ| ವಸುಧೆಯಾಸತ
ರಪಾಲಿಸುಕುಸುಮಶರದಹನಭಸಿತಭೂಷಿತವಿಗ್ರಹ||೧|| ರಾಮುಕೇ
ಳ್ವೈಯಂಧಕಾಸುರಂಸಂತುಷದಿಂ| ತಾಮರಸಮಿತ್ರೋದಯಂಗಂಡು
ಕೂಚಿಯಂ| ನೇಮಿಸಿಮಹಾಬಲಕೆಸಕಲಸನ್ನಾಹಸಂರಂಭದಿಂನಿಬಿ
ಡಮಾದ|| ಭೀಮವಿಕ್ರಮರಾಕ್ಷಸೇಂದ್ರರ್ಕೈತರೆಸಮರ| ಭೀಮನ್ನೈದಿದ

ನೈದುತಿರ್ಪಸೇನಾರಜದೆ| ಭೂಮಿಯಾಗಸದಿಶಾಮಂಡಲಮು ಭೇದ
ಮನಲೇನೆಂಬೆನಷ್ಟರಿಯನು॥೨॥ ವಾಜಿಹೇಷಾರವಂಖುರಪುಟಧ್ವನಿ
ಹಸ್ತಿ|ರಾಜಿಘಂಟಾಸ್ವನಂಬೃಂಹಿತಧ್ವಾನಂದಿ| ರಾಜಿತವರೂಥಚಕ್ರ
ದಘೋಷಮಖಿಳವಾದ್ಯಂಗಳಾರ್ಭಟಿತಂಗಳು॥ ಆಜಿಯಂಪಟುಭಟರ
ತೊಡರಘಲ್ಲಣೆಮುದ್ಯ| ಭೋಜಬಳವಚದ್ಬಿರಂಗಳಿಡಿಕಿರಿದುವಾ|
ರಾಜೀವಜಾಂಡಮಂಪೊಡೆಯುರದೆಂಬಿನಿಂಪಡೆ ನಡೆದುದೇನೆಂಬೆ
ನು ॥೩॥ ಬಲಮುಯಂಧಾತ್ರಿಯುಳ್ಳಂಶತ್ರುಜಯಮುನದ। ಛಲಮು
ಯಂದೊರೆಗಳೆಲ್ಲಂಕಡಿಮಗಸಸದ| ಕಲಿಮುಯಂಸೇನೆಯುಳ್ಳಂರಥಂ
ಛತ್ರಚಾಮರಕೇತುಬಲ್ಲೆಯುಗಳ॥ ಕುಲಮುಯಂಗಗನಮೆಲ್ಲಂಮೊರೆ
ವನಾದ್ಯಸಂ। ಕುಲಮುಯಂದೆಸೆಗಳೆಲ್ಲಂದನುಜಭೀತಿಮಿ। ಸ್ವಲಮು
ಯಂಲೋಕಂಗಳೆಲ್ಲಮೆನೆನಡೆದುದಾಬಲಮದೇಂವರ್ಣಿಸುವೆನು ॥೪॥
ತಗ್ಗಿದುದುಧಾತ್ರೀತಳಂಕುಲಾಚಲಚಯಂ| ನೆಗ್ಗಿದುದುಸುರೋರ್ವ್ಯಯ್ವ
ಬಸುರತಳ್ಕಂಕದಿಂ। ಮುಗ್ಗಿದುದುದಿಕ್ಕರಿಕುಲಂಬಳಕೆ ಬಸವಳಿದುಘ
ಣಪತಿಫಣಾಸಹಸ್ರಂ॥ ಬಗ್ಗಿದುದುತುಳಿದೊಡದಮಣ್ಣಕಪ್ಪರದಂತೆ|
ನೆಗ್ಗಿದುದುಕೂರ್ಮಖರ್ಪರಮಾಬಲದಭಾರ। ಉಗ್ಗಳಿಕೆಯಂತೊಗ
ಣತಕ್ಕಳವೆಸಿದ್ಧರುಮೇಳಿಕೇಳ್ಕೌತುಕವನು॥೫॥ ರಥವನೆವಡ್ಡಖ
ಳಂಪೋಗುತಿರೆಮುಗ್ಗಿರಾ|ರಥಿಕೆಡಗನಶ್ವಂಗಳೆಂಡಿಸಿದವಾಮುಂದೆ| ಪ
ಥದೊಳಡಿಗಡಿಗೆದುಗ್ಗಳುಕುಂಗಳಗಣತಂಗಳುನೆಗಳ್ದವುದೈತ್ಯನ॥ಪೃ
ಥುಕೀರೀಟಾಗ್ರದೊಳ್ಪಸ್ಸಕುಳ್ಳರಲುಮುವಿ। ತಥಪೆಂದುತ್ರಿಳಿಯುದೆ
ತೆರಳ್ದನಸುರಂಮುರಣ| ಕನನಮಂತಿಳಿಯದೀವುದೆಮುನಡಕೂಂಕೃ
ತಂರಾವುಕೇಳ್ಕ್ಟಯನು॥೬॥ಗರ್ಭದಿಂದಿಂತುನೆಲನಗಲಪೊಳ್ನಡೆ
ವಚಾ। ತುರ್ಬಲಂಪಯಣಸಯಣದೊಳಖಂಡಂಗಳಂ| ಸರ್ವದೇ
ಶಂಗಳಂಘನಪರ್ವತಂಗಳಂಸಕಲಘೋರಾರಣ್ಯದ॥ ಪರ್ಬುಗಗಳಂ
ನಗರನಿಗಮಖೇಡಮಡಂಬ। ಖರ್ಬಡಗ್ರಾಮಗಾಮಾಗ್ರಹಾರಂಗ
ಳಂ| ಪೇರ್ಗ್ವಾಳೆಗಳಂದಾಂಟಿಕೈಲಾಸಪುರದರಾಜ್ಯದವಳಿತಮಂಪೊ
ಕ್ಕದು॥೭॥ ನೆರೆಸೂರೆತುರುಗಳಂಪಿಡಿವರಿಪರಾದೂರ|ನಿರಿದರಾಂತೊ
ಡನೆಕಾಂಬದದುರ್ಗತತಿಯಮೇ|ಲುರಿಬಿಡೂಳ್ಗೊಂಟೆಯಂಕೊಂಡುನೆ
ಲಸರಿತಮಂಮಾಡುತಿರಲಸುರನಿತ್ತ॥ ನೆರೆಜಾಣಭಟ್ಟನೋರ್ವನಕರೆ
ದುನೀಂಪೋಗಿ| ಕರೆಗೂರಲನೊಡನೆನಮ್ಮಯ್ವೈರಿಯಾದಸಿರಿ|ಯೆ
ರೆಯನಂಕೊಟ್ಟುಬಾಳ್ವನೊ ಬಂದುಕಾದುವನೊ ಕೇಳ್ದುಬಾಪೋ
ಗೆಂದನು॥೮॥ಜೀಯವ್ಯಯೆಂದೆರಗಿಬೀಳ್ಕೊಂಡುಖಳಪಾತಕಂ|ರಯ್ಯ

ಘಾದಶ್ವರತ್ನಮನೇರಿನಿಖಿಳಜಗ| ದಯ್ಯನಿರ್ಪಮುಳಿಕೈಲಾಸದಬ
ಗಿವಾರ್ವಾರದೆಡೆಯೊಳೈತಂದುನಿಂದು|| ಕೈಯೆತ್ತಿಯಂಧಕಾಸುರನ
ವೀರಂಗಳಂ| ಪುಯ್ಯಲ್ಚುತಿರೆಶಂಕರಂಕೇಳ್ದುಕರಸಲವ| ನೊಯ್ಯನೈ
ತಂದೀಶನಿದಿರಿನೊಳ್ನಿಂದುಬಳಿಕಾಭಟ್ಟನಿಂತೆಂದನು ||೯|| ಧಾತ್ರೀ
ವಿಲೋಲನಮರಣ್ಯನಿರ್ಮೂಲನಂ| ಗೋತ್ರಪ್ರಚೂರ್ಣಮಖಿಳಾಬ್ಧಿ
ಶೋಷಣಮಿಂದು| ಮಿತ್ರಮಂಡಲಕಂಪಮುಡುಪತನಮಹಿಪಕರಿ
ಕೂರ್ಮಪತ್ನೀಮಂಗಳೆ|| ಸೂತ್ರಖಂಡಂಗಳಾದವುಮತ್ಪತಿಯದಂಡೆ|
ಯಾತ್ರೆಯೊಳ್ತವವಿಜಯಕಾರಣಂನೀಂಕಮಲ| ನೇತ್ರನಂಕೊಟ್ಟ
ಕಾಣ್ಬೆಯೊಬಂದುಕಾದುವೆಯೊಪೇಳೆಂದನಾಭಟ್ಟನು ||೧೦|| ತಾಪ
ಮಾಯ್ತುಜಹರೀಂದ್ರರ್ಗಂಧಕಾಸುರಪ| ತಾಪಶಿಖಿಕಿವಿಗಳಂಪುಗೆಬಳಿ
ಕ್ಕೊಡನಂತ| ಕೋಪವಮಾಸುರಚರವಚಂಗೇಳ್ದುನಂದೀಶವೀರೇಶ್ವ
ರಾದಿಗಳ್|| ಕೋಪವಮಾವರಿಸೆಶಿವನಾರ್ಬಿನ್ನೊಳುಗಿಕರುಳ್| ನೀಪಂ
ಧಮುಂಬಿಗುಳೊನಾಲಿಗಯುನರಿಕಾಲೊ| ಳಾಪನಿತುಸದೆಯೆನುತ್ತೆ
ದ್ಧತಮತಮಗೆಗರ್ದ್ದಿಸಿದರೇಂವೆಣ್ಣಸುವೆನು||೧೧|| ಸಾಕುಸಾಕಾಯ್ತು
ಹೋಹೋನಿಲ್ಲಿರೈನಿಮ್ಮ| ನೀಕಳಾವಂತನೇಗೈದನವನೆಂದುದಂ|
ಜೋಕೆಮಿಗೆಪೇಳ್ದುನಿವನಂಕೊಲ್ಲಸಲ್ಲದೆಂದೆಲ್ಲರಂನಿಲಿಸಿಬಳಿಕ || ಆ
ಕುಮತಿಯುಂಕರೆದುಹರಿಯುತ್ತತಾನೆತ್ತ| ಲೇಕಹಂಕರಿಸುವಂತಾ
ದುವೆವುಪೋಗೆನಲು| ಜೋಕೆಮಿಗತೀವರ್ತಮಾನವನವೆಂಬಂದುಖ
ಳಪತಿಗೆಸೂಚಿಸಿದನು||೧೨|| ಮತ್ತೆಹೊಡಕರಿಪೆಕೋಪಾಗ್ನಿರಕ್ಕಸ
ನಮೈ| ಪೊತ್ತಿದುದುಕೈಲಾಸಪರ್ವತವನೀಕ್ಷಣಂ| ಮುತ್ತುವೆನೆನು
ತ್ತಿರುಳ್ಪಗಲಾಗಿದಂಡುನಡೆತರುತಿರುಲಾಕ್ಷಣದೊಳು|| ಇತ್ತಲುಸುರ
ನದಾಳಿಗರ್ಗೆಸೆರೆಸೂರೆಗಳ| ನಿತ್ತರಾಜ್ಯದಜನಂಪೊರಬಾಗಿಲೊಳೊತ್ತ
ರೆಯಿ| ಡುತ್ತಿರಲ್ಕೇಳ್ದುಕೋಪದೊಳೀಶ್ವರಂನಂದಿಕೇಶ್ವರಂಗಿಂತೆಂದ
ನು||೧೩|| ಆಗ್ಸ್ಯಂತದೇವರ್ಕಳಂಸಿದ್ಧಗಂಧರ್ವ| ವಿದ್ಯಾಧರಾಳಿಯುಂ
ಭೂತಭೇತಾಳಬಲ| ಚೋದ್ಯದುಗ್ರಪ್ರಮಥಗಣಸೈನ್ಯಮಂಬ್ರಸ್ತ್ರ
ವಿಷ್ಣುಗಳಸೇನೆಗಳನು|| ಸರ್ವಪ್ರಸನ್ನಾಹದಿಂದಂಧಕಾಸುರವ| ಧೋ
ದ್ಯುಕ್ತರಾಗಿದಿರ್ದಂಡೆತ್ತಲೆಂದಮರ| ನದ್ಯಂಗನಾಥರಂನೇಮಿಸಲ್ಕರಿ
ಸಿದಂನಂದೀಶನುತ್ಸವದೊಳು ||೧೪|| ಅನ್ನಗಂಸಿದ್ಧವಿದ್ಯಾಧರರ್ಕಿಂ
ಪುರುಷ| ಕಿನ್ನರರ್ಗರುಡಗಂಧರ್ವಾಪ್ಸರರ್ಯಕ್ಷ| ಉನ್ನತಪಿಶಾಚ
ಗುಹ್ಯಕಭೂತನಿಕರಸಾಧ್ಯಾಳಿರಾಕ್ಷಸವೀರರು|| ಸನ್ನುತಮಯೂ
ರರುರಗರ್ಸಕಲಲೋಕಿಗ| ಳೆನ್ನೋಳ್ಪಲಂಬೆರಸುಬರೆಸರ್ವದಿಗಧಿಪ|

ತ್ತನ್ನೆಡೆಬಲಂಗಳೊಳ್ಬೆರೆಕರಿಯನೇರಿಸುರಪಾಲಕಂ ಪೊರಮಟ್ಟ
ನು॥೧೫॥ ತವಕದಿಂದಷ್ಟವಸುಗಳ್ನವಬ್ರಹ್ಮರವೆ। ರವರಸಂತತಿಗಳಾ
ದ್ವಾದಶಾದಿತ್ಯರೊ। ಪ್ಪುವಚತುರ್ದಶಮನುಗಳಖಿಳಗ್ರಹಾಳಿಗಳೆರ
ಲ್ಲದಗಣಿತದನುಚರರು॥ ಸುವಿವೇಕಿರಾಜಋಷಿಗಳುಜಗದಖಗಮೃಗ
ದ। ನಿವಹಾಧಿಪಸ್ಥಾವರಜಂಗಮಾದಿಯೊಳ್॥। ತವೆಬಲ್ಲಿದರ್ಬಳೆಸಬ
ರೆಬೊಮ್ಮನಂಚೆಯನಡರ್ದಿರದೆಪೊರಮಟ್ಟನು॥೧೬॥ ಅಗಣಿತಜನಾ
ರ್ದನರನಂತಬೊಮ್ಮರ್ಬಹಳ್। ದಿಗಧಿಪರಸಂಖ್ಯಾತಲೋಕಪಾಲರ್ಧ
ರೆಯ। ಯುಗಯುಗದಬಹುಚಕ್ರವರ್ತಿಗಳಪಾರ್ಧೀಪಾಧಿಪಖರ್ಂ
ಡಂಗಳ್॥ ಮಿಗೆಪಾಳೆಪಪರಿಮಿತರಾಜರ್ಕಳಮಿತಭೂ। ಮಿಗಳನಾ
ಳ್ವರಸುಗಳ್ಬೆರೆಮಂತ್ರತಂತ್ರಮಾ। ಯೆಗಳೊಡನೆಬಲಮಡಂಬರೆವಿ
ಷ್ಣುಗರುಡನನಡರ್ದಿರದೆಪೊರಮಟ್ಟನು॥೧೭॥ ವೀರೇಶಗುಹಷಣ್ಣಪ
ನಂದೀಶಭೃಂಗೀಶ। ಭೈರವರನೇಕಸೈನ್ಯಂಬೆರಸುನಡೆತರತಿ। ಘೋರಾ
ರಾಂಗಕಾಪಾಲಿಕಾಲಲೋಹಿತಧೂಮ್ರವರ್ಣವಿಷಧರಲೋಚನ॥
ಕ್ರೂರಾಸ್ಯವಜ್ರದಂಷ್ಟ್ರಕನನಿಲವೇಗನಂ। ಗಾರಮುಖರಂತಾಗ್ನಿಶ
ರಭಮುಖಮುಖ್ಯಮಾ। ದಾರೌದ್ರರೂಪುಗಳರುದ್ರಗಣಮಗಣಿತಂ
ಬಲವೆರಸಿನಡೆತಂದುದು॥೧೮॥ ಕಾಲಾಪಹರಣಘಂಟಾಕರ್ಣಧೂ
ಮಾಂಗ। ಹಾಲಾಶನಂವಿರೂಪಾಕ್ಷವಿಕಟಾಂಗನುಂ। ಕಾಲಾಸ್ವರೂಪಪ
ರವಿಶಶಿಪಾತಪರ್ವತಾಭರಣವಡಬಾಗ್ನಿತಿಲಕ॥ ನೀಲಾಂಗವಸ್ಥಿಮು
ಖಶಾಗರಾಪ್ಲೋಷಕಂ। ಕಾಳಧರಸರ್ವಭಕ್ಷಕಮೃತ್ಯುಹರಮಹಾ।
ಕಾಳನಂದಿಪ್ರಮುಖ ಪ್ರಮಥಗಣಮೊಗ್ಗಾಗಿ ಸೈನ್ಯಸಹಿತೈತಂದ
ನು॥೧೯॥ ವಾಮದೊಳುಶಕ್ತೀಗಣಂಬೆರಸುಪಾರ್ವತೀ। ಭಾಮೆಬ
ರೆವೃಷಭಯೋಗಾಚಾರ್ಯರುಂಮುನಿ। ಸ್ತೋಮಮಾಬಲಗಡೆಯೊ
ಳೈತರಲ್ಕೆಂದೆನಾನಾವೇದಮುಗ್ಘಡಿಸಲು॥ ಸಾಮೀಪ್ಯಸಾಲೋಕ್ಯ
ಸಾರೂಪ್ಯದವರುಂಸ। ನಾಮದಗಣತರುಗ್ರತತಿಮುಂತೆಬರೆಕಾಲ।
ಕಾಮಾಂತಕಂಮಹಾವೃಷಪತಿಯ ನೇರಿಕೈಲಾಸಮಂ ಪೊರಮಟ್ಟ
ನು॥೨೦॥ ಎಲೆಸಿದ್ಧರಾಮಕೇಳ್ಮೆಳೆವನಿಗಳಂಭಗಣ। ಕುಲಮನೆಣ
ಸಲ್ಬಹುದುಕಡಲೇಳರೊಳಗಿಪ್ಪ। ಮಳಲನೆಣಿಸಲ್ಬಹುದುಶಿವಗಣಂ
ಗಳಬಲದಲೆಕ್ಕಮನಿತಿನಿತೆಂಬುದಂ॥ ಬಳಿಕಾಶಿವಂಬಲ್ಲನರಿಯನೆಂ
ದೂಹಿಸುವ್ರೊ। ಡಳೆವಲ್ಲದಖಿಳಶಿವಗಣಮಂದುದುರ್ಗದಿಂ। ದಿಳಿದುಬೀ
ಡಂಬಿಟ್ಟದಂಡೆತ್ತಿಪಯಣಪಯಣದೊಳೆನಡೆತರುತಿರ್ದುದು॥೨೧
ಡವುಡೆಮುಂತಾಗಿರ್ದಬಹುವಾದ್ಯದಬ್ಬರಕೆ। ಶಿವೃಡ್ತಾಯುತ್ತಿಹಗತೀ

ಕುಲಂಬಲದಪದಹತಿಗೆ । ತವುಡಾವುತ್ತ ಗಿರಿಸಂಕುಲಂ ಸೈನ್ಯಭಾರ
ದಿಂ ನೀರೆಯುಂ ಸುತ್ತಿದಂತೆ॥ ಸಿವುಗಿದನಹಿರಾಜನಖಿಳದಿಗ್ಗಜರಾಜಿ
ಯುವುಡೊರಿವುಣ್ಗಿಟ್ಟಿದವು ಗಜತುಳಿದೊಡದ । ರವುಡೆಗಾಯುಂ ತಾ
ಯುತ್ತ ಕಚ್ಛಪನ ಬೆನ್ನಿದ್ಧರಾವು ಕೇಳೆದ್ಭುತವನು॥೨೨॥ ಗೊಂದಣಸಿ
ನಡವಮುದಕರಿಗಳಿಂ ಹಯಗಳಿಂ । ಮುಂದಣಂಮುಂಚುವಭಟರ್ಗಳಿಂ
ತೇರ್ಗಳಿಂ। ದಂದಣದ್ಧೊಳ್ಳೈತಪ್ಪವೀರರಿಂಧೀರರಿಂದೆಸೆವಬಹುವಾದ್ಯ
ದಿಂದಂ॥ ಪಿಂದನೆಣಿಸದೆ ಬರ್ಪ ಕಳಿಗಳಿಂ ಛಲಿಗಳಿಂ। ಸಂದಣಿಪ ಛತ್ರಧ್ವ
ಜಾಳಿಯಿಂ ಧೂಳಿಯಿಂ। ಕುಂದದೆಸೆವದ್ಭುತರಸಂಗಳಿಂ ಕಂಗಳಿನ್ನೋ
ಡೆಪಡೆಪಡೆಸಾದುದು ॥೨೩॥ ಏನೆಂಬೆನೈರಾವುಕೇಳತ್ತಣಿಂ ಹರನ।
ಸೇನೆಯೆಯ್ತತಪ್ಪುದಂ ಕೇಳಿತ್ತಣಿಂ ಬಳೆನ। ಸೇನೆಯ್ದಿದುದುಭಯಸೇ
ನೆಗಳಾನೆಗಳನೇಲಣಕೇತುಪಟವಾಗಳು॥ ಭಾನುಮಂಡಲಕಮು
ಸುಕಿರ್ದ ಧೂಳಂ ಬೀಳಿಸಾನಂದದಿಂದೈದುದಿರ್ಬಲದಚೂಣಿಯುಭ।
ಟಾನೀಕಮುಭಯಮುಂ ಕಂಡು ತೋಳ್ವೊಯ್ದು ಬೊಬ್ಬಿರಿದುದಾಕ್ಷ
ಣದೊಳು॥೨೪॥ ಇರ್ದೆಸೆಯ ಕುದುರೆಕಾರರದೂಣಿಯೊಳ್ಳಾಣು। ತಾ
ರ್ದ್ದು ನಿಡುಸೂಠಿಯೊಳ್ನಿಲ್ಲದೋರ್ವೋಘಯೊಳು। ಮಿರ್ದ್ದು ಸದಳಂಗಳಂ
ಸುಲಿದು ಸೆರೆತುರುಗಳಂ ಪಿಡಿದರಿದಿರಾದರೊಡನೆ॥ ಪೊರ್ದ್ದಿರಿದರೊನ್ನಂ
ಕಿದರ್ಮ್ರಳಿಪಿನ್ನೆಳಗೆ। ಸಾರ್ದ್ದು ಖೋಯೆಂದುರುಬಿ ತಮತಮಗೆ ಹೊ
ಯ್ದಾಡುತಿರ್ದ್ದರಲ್ಲಲ್ಲಿ ಬಳಿಕೋರ್ವರೋರ್ವರ್ಗೆ ತೆಗೆಯದೆ ನೊಂಕಿಬರ
ಲೀಯದೆ ॥೨೫॥ ಬೇರೆಬೇರಾಚೆಯೊಳ್ಪೊಂದಣಂ ಬಳ್ಗದುರೆ। ಕಾ
ದರ್ಯ್ತಂದು ಪಾಜಂ ಕಾಣುತೊಡಹಾಯ್ಸಿ । ತಾರುತಟ್ಟಂಮಾಡಿಕು
ದುರೆರಾವುತರಲ್ಲಣಂಗಳೊಂದೊಹೊಯಿಲಿಗೆ॥ ಹಾರಲಾತುರಂಡಾಗಿ
ಪರಿದರಕ್ತಂಪೊನ। ಲ್ಮೀರೆಕಡಿತಲೆಗಳಂ ಕೊಂಡು ತನ್ನೊಡೆಯರ್ಗೆ।
ತೋರಿಸಿನಿವಾಳಿಸಿಬಿಸುಟ್ಟರೀಬರ್ಲದ ಚೂಣಗರದೇಂ ವಣಿಸುವೆ
ನು॥೨೬॥ ಭಟರೊಡನೆ ಭಟರಾನೆಗಳೊಳಾನೆಗಳ್ಮರಾ। ಚಟುಳರ
ಥಿಕಾಳಿಯೊಳ್ ರಥಿಕಾಳಿರಾವುತ। ರೊಳ್ಪಟು ತರದರಾವುತರೊನ್ನಂಕಿ
ಬಳಿಕೆಚ್ಚು ಪೊಯ್ದಾಡುತಿರೆಮರಳಿಮರಳಿ॥ ಅಟಮುಟಸಿಮುಗುಳೊ
ತ್ತಿಕತ್ತರಿಸಬಳಿಕೋಡಿ । ದಿಟಮಲ್ಲಪುಸಿಪೊಯಿಲದಂತೆಗೆಯೆನುತ್ತೆ
ನಿ । ಟ್ಟಟದಕಳಿಗಳ್ಬಿದುತಿರ್ದರೀರ್ಗ್ಬಲದಮುಂಗುಡಿಯವರದೇನೆಂ
ಬೆ॥೨೭॥ ಬರುತಿರ್ದ ದನಿತರೊಳು ಸಿದ್ಧರಾಮೇಶಕೇ। ಳ್ಯರಧಿಕರಧಿಗ
ಳಿರದೆ ತಾಗುವಂತಾಮಹಾ। ಗಿರಿಗಿರಿಗಳಿದಿರಾಗುವಂತೆ ಪೇರಡವಿಪೇ
ರಡವಿಗಳು ಸಂದಿಪಂತೆ ॥ ಧರೆನಭಂಗಳೊಸ್ಸಂಕುವಂತೊಡನೆ ಪಳೆಯ

ಚಲ| ಧರಜಲಧರಂಗಳೊರಸೊರಸಂತೆಕಂಗೆಸದ| ವೆರಡೆರಸುದಳವನಿ
ತರೊಳು ಪಶ್ಚಿಮಾಬ್ಧಿಗೃಹಮಂ ಭಾಸ್ಕರಂ ಪೊಕ್ಕನು ||೧೮|| ಮುಗಿದು
ದಬ್ಜಾಳಿ ಬಾಯ್ದೆಗೆದುದುತ್ಪಲನಿಕರ| ಮಗಲಿತು ರಥಾಂಗಕುಲವೊಗೆ
ದುತಾಗಳೆಸಂಜೆ| ಜಗಜಗಿಸಿತುಡುಗಣಂಗಗನದಿಗ್ಧರೆಗಳಂ ಮಿಗೆಮು
ಸುಂಕಿದುದು ತಿಮಿರಂ || ತೆಗೆದುದಾ ಚೂಣಿಗಾಳಗವಾಗಬೇಗದೆಳೆ|
ಯುಗಪತಿಗಳಾಜ್ಞೆಯಿಂತೆಗೆದರೆರಳ್ದಂಡು ನೆಲ| ನಗಲದೊಳ್ಬೀಡುಬೀ
ಡುಗಳ್ಪೈದೆಬಿಟ್ಟವಾರೊಪ್ಪಗಳೊರವರೇಳ್ಗೆಗಳನು ||೧೯|| ಇಳಿಪುಗಜವಾ
ಜಿಗುಳಗಳಪಲ್ಲಣಂಗಳಂ | ಕಳಚುತ್ತೆತೇಜಿಗಳನೇಕೊರಳನೊ
ಗವೆತ್ತು|ಗಳಪೇಗಳಂ ನೂಂಕಿಜಿಡು ಸಬರವುಂಜೇವದನಕೆನೀರ್ಗಳೆ
ನೀಂಟಸು|| ಬಿಡಿದು ಗೂಟಂಗಳನೆತ್ತಾನೆಕುದುರೆಗಳನೀಂ| ದಳೆಯಿ
ಕ್ಕಿಗುಡಿಗಳಂ ಪೊಯ್ದುತೃಣಕಾಷ್ಠಾದ್ಯ | ಜಲಮುಖ್ಯಸಾಧನವ
ನೊದವಿಸೆಂದೆಂಬದನಿ ಯುಭಯಕಟಕದೊಳೆಸೆವುದು ||೨೦|| ನೀಲ
ಕಲಧೌತಕನಕಾರುಣಮುಖಾದ್ರಿಗ| ಳ್ತಾಳಿಬಹುರೂಪನೆರದೊಡ್ಡಾ
ದದೆಂಬಂತೆ| ಪಾಲಾಗಿನೆಗದವು ಬಂಣಬಗೆಗಳೊಳೆಸೆಗೂಡಾರಗಳು ರು
ದ್ರನ|| ಪಾಳೆಯದೊಳೆಸ್ಸೆಸೆಗಳೊಳ್ಬಿಟ್ಟದಷ್ಟದಿ| ಕ್ಪಾಲರ್ತ್ತದಂತರಂ
ವೀರಾಧಿಪಮಘರಿರೆ| ನೀಲಕಂಧರನೆಡಬಲಂಗಳೊಳು ಹರಿಯಜಬಿ
ಟ್ಟರದನೇನೆಂಬೆನು ||೨೧|| ಇಂತು ನೆಲದಗಲದೊಳ್ಸಕಲವಿಭವಂಗಳಿಂ
ದಂತರದೊಳೀಶ್ವರನದಂಡಿಳಿದು ದಿದರಂತ| ನಂತಪರಿವಿಡಿಯೊಳನಿ
ತಗಲದೊಳಗಂಧಕಾಸುರನಪಾಳೆಯಮಿಳಿದುದು|| ಕಾಂತಿಯಿಂದಂ
ಗಡಿಗಳೊಳ್ಸರ್ವಜನತಾಗೃ | ಹಾಂತದೊಳ್ಧೊರೆಧೊರೆಗಳೊಲ
ಗದೊಳೊಪ್ಪಿದವ| ನಂತದೀಪಂದೊಟ್ಟಿವಟಗಗಳ್ನಭದನಕ್ಷತ್ರ
ಜಾಲದಂತೆ ||೨೨|| ಸುತ್ತಲುಂಗೇರಿಯಂನೆಗಳ್ತಾಪಾಳೆಯದೊ |
ಳೆತ್ತೆತ್ತಲುಂ ಕೋಟವಾದ್ಯಘೋಷಂಗಳಿಂ | ಪೊತ್ತಿಸಿದ ಪಂಜು
ಗಳನೇಕದಿಂದೊಳೆಪಹರಿಗಳ್ಕೆರದವವರಪೊರೆಗೆ || ಬಿತ್ತರದೊಳಶ್ವ
ಗಜ ರಥಪದಾತಿಗಳೊಡನೆ | ಸತ್ತುಪದ್ಮಪ್ರಬಲಭಟರುಗ್ಗಡಂಗಳ
ನಿ | ರುತ್ತಿರಲ್ಕುಭಯಶಿಬಿರಂಗಳುಂಪಲವುತೆರದೆಚ್ಚರಿಕೆಯಿಂದೆಸೆದ
ವು||೨೩|| ಆರುದ್ರನೇಮದಿಂ ಬಲದಕಾವಲ್ಕಾಲ| ಭೈರವನವಗಮಾ
ಯ್ತುಸೇನಾಧಿಪತ್ಯಂಕು| ಮಾರಕಂಗಾದುದೀಶ್ವರನಲ್ಲದುಳಿದರೊಡೆ
ತನವಾಯ್ತುದಕ್ಷರಿಪುಗೆ|| ಈರಕ್ಕಸರತಳವರಂ ಜಂಭನವನಪರಿ| ವಾ
ರಾಧಿಪತಿಯೆಶತಮಾಯನಾಬಲದಾರ| ಭಾರವೇಶುಂಭಾಸುರಂಗಾ
ದುದಿರುಳಿನೋಲಗದೊಳವರಿತ್ತಂಡದ||೨೪|| ನಾಳೆಬಲ್ಗಾಳಗವೆನು

ತ್ತೆಸಾರಿದರೆರಳ್ಪಾಳೆಯಂಗಳೊಳೋಲಗಂಪರೆದುದುಂದುಭಿ । ದ್ರಾ
ಲತಾಂಗಿಯುಸೌಖ್ಯಮಂಪಡೆದು ದಖಿಳಜನಮನಿತರೊಳ್ತುಂಬೆಳಗಿ
ನ॥ಕೋಳಿಕೂಗಿತುಮೂಡುದೆಸೆಕೆಂಪಡೆದುರ್ದ, ಬ್ರಾಹ್ಮಿಯುಳ್ದರ್ವು
ಮುಗಿದವುತ್ಪಲಂಪೂರ್ವಾಂಗ। ನಾಲಲಿತಮಾಣಿಕ್ಯಮುಕುರದಂತು
ದಯಾದ್ರಿಯೊಳ್ಭಾಸ್ಕರಂಮೆರೆದನು ॥೩೫॥ ರುದ್ರನುಂಪವಡಿಸಿದ
ನೇಳ್ಭತ್ತರಾವೀರಭದ್ರಮುಖ್ಯರ್ಕಳುಂಪಾಳೆಯದೊಳೆಲ್ಲರ್ಗೆ। ನಿ
ದ್ರೆತಿಳಿದುದುಲಗ್ಗೆವರೆಮೊಳಗಿದವುನಿತ್ಯನಿಯಮಂಗಳಂತಿರ್ಚಿಸಿ ॥
ಸಧ್ರಾಜರಾಜವ್ರೋದ್ಯುಕ್ತಬಲರಾಗಿತ। ತ್ತದ್ರವ್ಯವಾಹನಂಗಳನಡ
ರ್ದರುತ್ತುರಗ। ಭದ್ರಗಜರಥಪದಾತಿಗಳಪೌಜುಗಳೆಳ್ಬಲದೊಳಾತ
ಮಾದವು॥೩೬॥ಎಲೆಸಿದ್ಧರಾಮಕೇಳ್ಕಲಹಸಮಯಂಗಂಡು। ಲಳಿಮ
ಸಗಿದವುಕುದುರೆಗಳ್ದಂತಿಗಳ್ತಮ್ಮ। ನೆಳಲನಿದಿರಾನೆಯೆಂದಪ್ಪಳಿಸಿ
ದವುಪಟುಭಟರ್ತಮ್ಮಂಚಿತವಕಿಸಿದರು॥ಬಳಿಕನಸುನಗುತಂಧಕಾಸು
ರಂತನ್ನಬಲ। ಗೆಲದಶುಕ್ರನಮೊಗಂನೋಗಿತೋರೆಸುವುದೀ। ಬಲದ
ಧೊರೆಧೊರೆಗಳಂಬೇರೆಬೇರೆನೆಶುಕ್ರನಾಖಳಂಗಿಂತೆಂದನು॥೩೭॥ಲೇ
ಸಾದುದಾಲಿಸೈದನುಜೇಂದ್ರನೆಗಳೊಳಕಂ। ಣ್ಸಾಸಿರದಪಿಡಿದವಜ್ರದ
ಶುಭ್ರಗಜಕಂಧ। ರಾಸನದೊಳಿರ್ಪಗಾಡಿಯುಸುತ್ತಲತ್ತಲುಂಬಳಸಿ
ಕೊಂಡೊಪ್ಪುತಿರ್ಪ॥ಆಸಕಲದಿಕ್ಪಾಲಕಾದಿಬೃಂದಾರಕಮ । ಹಾ
ಸುಭಟಕೋಟಿಗಳಮಧ್ಯದೊಳ್ಳೋಡೆಸುವಿ। ಲಾಸದಿಂದಿರ್ಪತನೀ
ತನೇಜಂಭಾರಿಯೆಂಬವಂನೋಡೆಂದನು॥೩೮॥ರಾಜಹಂಸನಮೇಲೆ
ರಂಜಿಸುವನಾಲ್ಮೊಗದ। ತೇಜದವನೇಬ್ರಹ್ಮನೀತನಿಂದಾದವರ್। ರಾ
ಜಿಪನವಬ್ರಹ್ಮರವರಿಂದಮಾದನುಜರಾಸುರನರೋರಗಾದಿ॥ಮೂಜ
ಗಂಗಳೊಳ್ಮೈದೆತೋರ್ಪನಾನಾಜೀವ । ರಾಜಿಯುದಿಸಿದುದುನಮ್ಮ
ಯಸೇನೆಯೊಳಗೀತ। ನಾಜಿಗಿದರಾಂಪಟಂಕಾಣೆನಿವನೇಲೋಕಪಿ
ತನೊಳ್ಪ್ಪನೋಡೆಂದನು॥೩೯॥ ಆಲಿಸಿಂನತ್ತಲಾಪಕ್ಷಿರಾಜನಬೆನ್ನ।
ಮೇಲೆರಂಜಿಪಶಂಖಚಕ್ರಗದೆಶಾರ್ಙ್ಗಡವಿ । ಶಾಲಚಾತುರ್ಭುಜದ
ಪೊಳೆವಪೀತಾಂಬರದಮಸ್ತಕದಮಣಿಮಕುಟದ ॥ ನೀಳಕಾಯದ
ಕೌಸ್ತುಭಾಂಕಿತೋರಸ್ಥಳದ । ಲೀಲೆಯಿಂಸಕಲಲೋಕಂಗಳಂರಕ್ಷಿ
ಸುವ। ಪೇಳಲೇನಸ್ವಾರ್ಥನಾಮದಸುರಾಂತಕನಿವಂನೋಡುನೀನೆಂ
ದನು॥೪೦॥ಆರೈದುನವಿಲಡವಾರ್ರೊಮ್ಮೊಗದಜಗದೇಕ। ವೀರನಂನೋ
ಡುಪಿಂದಖಿಳಲೋಕಂಗಳಂ। ತಾರಕಂತಿಂದುತೇಗುತ್ತಿರಲುವಿಧಿವಿಷ್ಣ್ವ
ಮುಖ್ಯದಿವಿಜರ್ಮೊರೆಯಿಡೆ॥ ಮಾರಾರಿಕೇಳೀತನಂಪಡೆದೊಡೇಳ್ದ

ನದೊಳು ಘೋರರಾಕ್ಷಸಪ್ರಾಣಮಂಕೊಂದನಿನ್ನಿವಂ| ಗಾರಿದಿರು ಶಿವಬಲ
ಕೆಸೇನಾಧಿನಾಯಕನಿವಂ ನೋಡು ನೀನೆಂದನು||೪೧|| ಭೀಮರೂಪಿ
ನಫಲಕಖಡ್ಗದಿಂದೆಸವನಿ| ಸ್ಸೀಮವೀರೇಶನಿವನೀಶ್ವರನಕೋಪಾ
ಗ್ನಿ| ಧಾಮದೊಳಗುದಿಸಿಯಜಸರಿಗಳೆಂಬಡಿದು ದಕ್ಷನಶಿರವನರಿದು
ಮುಖದ|ಹೋಮದೊಳಗಿಟ್ಟನರಸರಿಪಂಚವೋಡ್ರಬಹು| ಭೀಮ
ವಿಕ್ರಮಜೋಲಬಿಯಳಸಿಂಪಾಸುರ| ಸ್ತೋಮಮಂಮುಳಿದು ಸಂಹ
ರಿಸಿದನಿವಂಗೋರ್ವರಿದಿರಿಲ್ಲಕೇಳೆಂದನು||೪೨|| ಅವರನೋಡತ್ತಲಾ
ನುಂಮುನಿಯೆಲೋಕಸಂ| ಘವನು ರು ಪ್ರವರ್ಸಕಲಬೊಮ್ಮಾಂಡ
ಭಾಂಡಮಂ| ತವೆ ನಿಮಿಷದೊಳಗೊಡೆವರಬ್ಬಿಗಳ ನಾಸೋಷಣಂ
ಗೊಂಬರಾಗಸವನು|| ಅವನಿಯಂ ಕಿತ್ತು ತಾಳ್ವನೊತ್ತುವಶೈಲ| ನಿ
ವಹಮಂಪುಡಿಸ್ಯವರಹುದಿಪ್ಪವೆಂದೊಡೀ| ಶಿವನಲೆಕ್ಕಿಸದರುದ್ರಪ್ರ
ಮಥಭೂತಗಣಮುಗಣತಂಗಳೆಮೆಂವನು||೪೩|| ಲೀಲೆಯಿಂ ಪಂಚವ
ದನದತಿಪಂಚಾಕ್ಷಿಗಳ| ಶೂಲವಜ್ರಾಭಯಮಹಾಖಡ್ಗಪರಶುಸು|
ವ್ಯಾಳಾಗ್ನಿಪಾಶಾಂಕುಶಪ್ರಘಂಟಾಯುಕ್ತಚಾರುಭುಜದಶಕದಿಂದ||
ಆಲೋಲಫಣಿಕುಂಡಲದರ್ಥದೊಳ್ಮೆರವ ಪಾಲಾಕಲದಚಂದ್ರಕಾಂ
ತಕಾಂತಿಯ ಶಿರೋ| ಮಾಲೆಗಳ ಚರ್ಮಾಂಬರದವೃಷಭವಾಹನದದೇ
ವನಂನೋಡೆಂದನು||೪೪|| ಮರೆಯ ಮಾತಲ್ಲವಗಣತಸರಿಯ ಜೇಂದ್ರ
ರಂ| ನೆರೆಸೃಜಿಸಿರಕ್ಷಿಸಿಲಯಂಗಯ್ದುವಾಣದುರೆ| ಮುರುಪ್ರಟ್ಟಿಸುವ
ನೀಮಹಾತ್ಮನಮಹಾತ್ಮೆಯಂಶೇಷಂಗಪೊಗಳಲಳವೆ || ಮರೆಚೊ
ಕ್ಕರಂಕಾಯ್ವಮಾರಾಂತರಂಕೊಬ್ಬ| ತರಿಸುಂದಬಿರುದೀತವದುಶರ
ಣ್ಗೊಗುಪಿಂದ| ನರಿದರಿದು ಪೇಳ್ವೆವುಕೆಡಲ್ವೇಡವೆನೆಖಳೆಂಖತಿಯೊ
ಳಂದಂತೆಂದನು ||೪೫|| ಪಿಂದಳೆವರೊಳೊಳಾನದೋರ್ವನೇಯಾತ
ಯ್ಯ| ಬಂದು ಕರುಳೆಂತೊಳಪ್ರೊಲಾಯಾತ್ತಯ್ತಗುರುಗಳೇ| ನೆಂದರೇ
ನೆನುತೆಕಿಡಿಕಿಡಿಯಾಗಿ ಬಳಿಕಾಖಳೆಂತೀವ್ರಕೋಪದಿಂದ|| ಪೊಂದೇ
ರನಾಭರ್ಟಿಸಿನೂಂಕುತಿರಲಾಕ್ಷಣಂ| ಮುಂದುವರಿದು ಭಯಸೇನಾ
ಭಟಚೂರ್ಣಯೋ| ಳ್ಸಂದಿಸಿಮಹಾಹವದೊಳಬ್ಬಾಡಿದಬೊರ್
ಬ್ಬೆಯಬ್ಬರಂಪಬ್ಬುತಿರಲು || ಗರ್ಬದಿಂಬಡಿವವಾದ್ಯಧ್ವನಿಧರಿತ್ರಿ
ಯೋ| ಳ್ಬಬಿರ್ದುದುಮಡಲಿರಿದು ಪಟುಭಟತರ್ಂತವೊಮ್ಮೆ| ಳೊ
ಬೊರ್ಬ್ಬರಂಪರೆದು ಹರಿಗೆಬಿಲ್ಲಬಳೆ ದೊಂಕಣಕತ್ತಿತವೆಮುಸುಂ
ಡಿ || ಕಬ್ಬುನದಕೋಲ್ಮುಖ್ಯವಿವಿಧಾಯುಧಂಗಳಿಂ| ದಿಬ್ಬಲದ
ಕಾಲವರೊಪ್ಪಿಯಾಡಿನೆತ್ತರಿನ| ಪೇಚೊರ್ಳೆಗಳೊಳ್ತೆಂಕುತಿರ್ದರ್ರ

ರನಿಮಿಷದೊಳುರಾಮಕೇಳದ್ಭುತವನು ॥೪೭॥ ಮತ್ತೆ ಶತಮಯೂ
ಷಣ್ಮುಖರನೇಮಂಗಳಿಂ। ದೊತ್ತಿತಂದುಭಯಚಾತುರ್ಬಲಂಕವಿಕ
ಲಿಯೆ। ನುತ್ತೆರಥದೊಳ್ತೇತುರಂಗದೊಳ್ಕುದುರೆಕರಿಯೊಳ್ಗಜಂಭ
ಟರೊಳಾಳು॥ಒತ್ತಿದರ್ಧೋರೆಧೊರೆಗಳೇಚೆನ್ನೊಳಿದುರ್ನಡೆ। ಮುಂ
ತ್ತುತ್ತೆಗದೆಸು ಸೂಂಕುತಿವಿಪ್ಪೊಡೆಪ್ಪೊರಳ್ಗಿರಿದು। ಕತ್ತರಿಸು ಸೀಳ್ಪ್ರೋ
ದು ಸುಂಗೆನು ತತಮ ತಮಗೆಕ್ಕೈಕೊಂಡರೇಂ ಮೇಳ್ವನು ॥೪೮॥ ಹೊಡ
ರರ್ಧುಲ್ಲಿಗಳಡಾಯುಧಕ್ಕೈಯ್ಯಾಪ್ಪೊಡೆಸರಳ್। ಹೊದೆಗಳಂತತ್ತ್ಸಳಿಂ
ಗಳೊಳುಕಟ್ಟಿಬಿ। ಲ್ಲದೆಯು ನಾರ್ದೈದು ಗೊಲೆಗೇರಿಸು ತಜೀವಡೆದು ಕ
ಣಾರ್ಂತಕಂಬು ದೊಟ್ಟ॥ ಕದಲದತ್ತಿತ್ತ ಮುಂಡಿಯುನಿಕ್ಕಿ ತೆಗದೆಸು।
ತ್ತಿದಿರಂಬುಗಳನೊಡನೆ ಖಂಡಿಸುತ್ತೆ ಸುಗೆಗುಂ। ದದೆಕೊರಳ್ನಿಡುಗೆ
ಳಿಕ್ಕಡಿಸಲೆಚ್ಚಾಡಿದಬಿರ್ಲ್ಲಬಿನ್ನಣಗರಂದು ॥೪೯॥ ಮಲತೆರದಬಿರು
ದುಗಳ್ಕಿರುಗೊಂಡೆಗಳ್ನಿಲ। ಕ್ಕಲವಧುಲ್ಲಿಗಳಂಗದೊಳಗಮರೊಬಣ್ಣ
ಬಗೆ। ಗಳಚೆಳ್ಳಿಪೊಂಗಬ್ಬಿವರಿಗೆಯಂತೊಡೆಚಾಟುಗೊಳು ತೊಡನೆ
ಖಡ್ಗಂಗಳ್॥ ಝುಳಪಿಸುತೆಲಾವಣಿಗೆಯಂ ಕದಲದೊಡ್ಡಿತ। ಪ್ಪಳವಿ
ಮೇಲ್ಕಿಳ್ವೊಯಿಲ್ಮ್ರನೆದಿವಿಗಳಿಂದ ಮೃ। ಗಳ ತುಂಡುಗಳ್ಬೀಳ್ವಮೂ
ದಲಿಸಿಪ್ಪೊಯ್ದಾಡುತಿರ್ದ ರಾದರಿಗೆಯವರು॥೫೦॥ಮಿಗೆತನಗಸಂಜೋ
ಗವುಂತೊಟ್ಟ ಹಯ ತತಿಗ। ನೊಗರಂಬಕಡಿಯಣಂಗಳನಿಟ್ಟ ಹಲ್ಲಣ
ದ। ಬಿಗುಹುಗಳ ತಾಪಣೆಯಲೇವಗಳ ಸಳವಡಿಸಿಬಲ್ಲಂದವಿಡಿದು ನಮಿ
ಸಿ॥ನೆಗೆದಡರಿನೇಜೆಯಂಚೊತಾತ್ರಿತ್ರಿವಿದೊಡನೆ।ಚಗಿದತ್ತಿ ಬಿಸುಡು
ತ್ತೆರಾವುತಕುರ್ದುರೆಗಳ। ಬಗಿಮಾಡಿಕಾದುತ್ತಲಿತ್ತಲಿರ್ಬಲದಘೋ
ಟಾರೊಢರಾಹವದೊಳು ॥೫೧॥ ಹೊರಜೆಮಿಳಿಘಂಟೆಸರಪಳಿಕೊಂ
ಬುಕತ್ತಿಯಂ। ಬರಕದಳಿರಂಚೆಗೆಗಳಂತಾಳ್ದಭದ್ರಮದ। ಕರಿಗಳೆನ
ಡದುರ್ಜೋದರ್ಕಳಂಕುಶದೊಳೊತ್ತಲುಘೇಳಿಡುತ್ತಗಲಕೆ ॥ ಪಿರಿ
ದೆಡಬೇಂಪಿಂದುಮುಂಡಣವರಂಕಾಲೊ। ಳೆರೆದು ತೇರ್ಕುದುರೆಗಳನ
ಪ್ಪಳಿಸಿಮಿಗೆಜಾರಿ। ವರಿದಾನೆಯಾನೆಯೋಳ್ಕೈಗೊಟ್ಟುತಿವಿದಾಡು
ತಿರ್ದವತಿಗಾಢದಿಂದಂ ॥೫೨॥ ಮಾರುವಗಳಂಪೂಡಿಕೀಲಚ್ಚುಬ
ಳೆಮೊಳೆಯು। ನಾರ್ಮ್ಮದು ಸಿಂಧಮುಂನೆಗಪಿಶಸ್ತ್ರಾಸ್ತ್ರಮುಮ। ನೋ
ರಂತೆತುಂಬಿಚಮ್ಮಟಗೆವಿಡಿದಾ ಸೂತನಿದಿರಾಗಿತಂದಿರಿಸಿದ ॥ ತೇ
ರತೇಜಗೆನಮಿಸುತೊಡನೇರಿಬಿಲ್ಸರಳ। ಸಾರದಿಂಕರಿತುರಗರಥಮ
ಟುಭಟಾಳಿಸಂ। ಹಾರದಮಾಗಲ್ಕಿರೆವರೂಥದವರೆಚ್ಚಾಡುತಿರ್ದರತಿತ
ವಕದಿಂದ ॥೫೩॥ ಮಸಿದಪೇರ್ಬುಲಿಯಂತೆಹುದುಗಿಮಿಗೆಲಂಘಿಪ।

ಕರ್ನಾಟಕ ಪ್ರಿಂಟಿಂಗ್ ಅಭಿವೃದ್ಧಿ ಕಂಪೆನಿಯ

ಕಾರ್ಯನಿರ್ವಾಹಕರು.

ಅಗ್ರಾಸನಾಧಿಪತಿ

ಮಂಗಳೂರು ಪಂಡಿತ ವಿಠಲಾಚಾರ್ಯರು.

ಕಾರ್ಯದರ್ಶಿ

ಮ॥ ಕಾಮಣ್ಣನವರು.

ಶ್ರೀರಸ್ತು.

ಜಯಮಹಾದೇವ.

---

ಸಕಲನಿಗಮಾಗಮ ರಹಸ್ಯಸಾರವೆನಿಸಿ
ಶಿವಭಕ್ತರಿಗತ್ಯಂತೋಪಯುಕ್ತವಾಗಿರುವಂತೆ
ದಶಶೈವ ಪುರಾಣ ಸಂಗ್ರಹವಾಗಿ
ಸಂಸ್ಕೃತದೊಳಗಿದ್ದುದಂ

ಕನ್ನಡವಾಗಿ ಎಲ್ಲರಿಗುಂ ತಿಳಿವಂತೆ
ವಿರೂಪಾಕ್ಷ ಪಂಡಿತಾರಾಧ್ಯರಿಂ ರಚಿಸಲ್ಪಟ್ಟ

# ಶ್ರೀ ಚನ್ನಬಸವೇಶ್ವರ ಪುರಾಣವು

ಪಂಡಿತರಿಂದ ಪರಿಷ್ಕೃತವಾಗಿ

---

ಬೆಂಗಳೂರು
ಕರ್ನಾಟಕ ಪ್ರಿಂಟಿಂಗ್ ಅಭಿವೃದ್ಧಿ ಕಂಪಿನಿ ಏಜೆಂಟ
ವಿ. ರಾಮಯ್ಯನವರಿಗೋಸ್ಕರ

ಬೆಂಗಳೂರು
ವಿಚಾರದರ್ಪಣ ಮುದ್ರಾಕ್ಷರ ಶಾಲೆಯೊಳ್
ಮುದ್ರಿಸಲ್ಪಟ್ಟಿತು.
೧೮೭೭.

ಸುರ್ಸಗಿದೆಕ್ಕಟಿಂತೆಪಾಯ್ದೆತ್ತಿಬಿಸುಡುವ | ಪೊರ್ಸಪಾವಿನಂತೆ
ಮೋಲ್ವರಿವರ್ಕರಳ್ದೆತಗರಂತೆತಾಗುವರಾಹವಂ|| ಮಸದಾನೆಯಂತೆ
ಮಲೆತೊತ್ತುವರ್ಕಾಳ್ಕ್ರೋಣ | ನೆಸಕಮೆನೆಪೊಯ್ದಾಡುವಸಿರ್ಗಗೆ
ದಂತೆಗ| ಜರ್ಸಿಬಡಿವರಾಹವ್ರೋಗ್ರೇಕಬಂದೀವರ್ಲದಸುಭಟರೇಂವ
ಣ್ಣಿಸುವೆನು||೫೪|| ನೊಂಕುವತರ್ರಿವರಿರಿವರ್ಪರಿವರಕ್ತದೊ| ಳ್ತೊಂಕು
ವರ್ಬ್ಬೀಳ್ವರೇಳ್ವತಿರ್ವಿದುಕೆಡಪಿನೆಲ| ಕಾಂಕುವರ್ಕಡಿವರುಡಿವಸರ್
ಮರನಿಭರ್ರಾವೇಶದಿಂವ್ಯೈಮೃಗಳಂ || ಸೊಂಕುವಸಿರ್ಗಿವರಗಿವ
ಬರ್ಲಾಂಬುಧಿಯಂಕ| ಲಂಕುವಪರ್ಳಿವರಳಿವಸರ್ಳಟುಕಕ್ಷದೊಳ್|
ರಿಂಕುವಜರ್ವರ್ರೇಗ್ವಬರ್ಳಿಕ್ಕೀಬರ್ಲದಸುಭಟರ್ಕಳಾಹವದೊ
ಳು||೫೫|| ಪೆಣದಮೆದಮಾಂಸದೊಟ್ಟಬ್ಬಿಸಿಯುಪರಿಕಾಲ್ವೆ | ನೆಣದ
ಪೇರ್ವಟ್ಟಮಿದುಳಿನರಾಸಿಕರುಳತಿಂ| ತ್ರಿಣತೊರಳೆಗುಪ್ಪೆಮಜ್ಜೆಯ
ತವಸುರ್ಂಟಗೆಯಸಾಲ್ತುಳಿತಖಂಡಂಗಳ್|| ಬಣಬೆನೆತ್ತರಿನಪೊಳೆಮೂ
ಳೆಬಿಕ್ಕಗಳಸಂ | ದಣಿಕೊಬ್ಬಿದೆಕ್ಕಾಳಿಜಗಳ್ಕಕ್ಕತ| ದ್ರಣರಂಗ
ದೆಳ್ಗೆಡೆಯೊಳಂತೀವಬಲಮರಿಳೊಪ್ಪಿದರ್ವೇಂಬಣ್ಣಿಸುವೆನು ||೫೬||
ಇಂತೆಸವಚೆನ್ನಬಸವೇಶ್ವರಪುರಾಣಮಂ| ಸಂತಸದಿಬರದವರ್ಗ್ಗೀ
ದಿದರ್ಗರ್ಥವಾ| ದ್ಯಂತಮಂಬಿಡದೆಪೇಳ್ದರ್ಗೆ ಪರಿಸಿದವರ್ಗೆ ಭಕ್ತಿಯಿಂ
ಕೇಳ್ದವರ್ಗೆ|| ಸಂತತಂಸಕಲಸುಖಮಂಸಕಲಭೋಗಮನ| ನಂತ
ಸೌಭಾಗ್ಯಮಂಕೊಟ್ಟುರಕ್ಷಿಸುವನಾ| ಕಂತುಹರನಪರಾವತಾರನೆ
ನಿಸುವಚೆನ್ನಬಸವೇಶನಕ್ಕರಿಂದಂ ||೫೭||

ನಾಲ್ಕನೆಯಕಾಂಡದಲ್ಲಿ೮ನೇಸಂಧಿ ಮುಗಿದುದು

ಅಂತುಸಂಧಿ ೪೮ಕ್ಕಂ ಪದ ೧೯೯೭ಕ್ಕಂ ಮಂಗಳ.

* ೯ನೇಸಂಧಿ *

ಸೂಚನೆ|| ಇರದೆಶಂಭಾಸುರನಧುರಕೆನಿಲಲಾರದಾ | ಹರಿ
ಯುಜೇಂದ್ರಾದಿಸುರರೋಡುತಿರೆಕಾಣುತ್ತೆ| ಹರಕುಮಾರಂಸ
ಕಲದೈತ್ಯಗಂಮುರಿದುತಿರುಗಿದನಧಿಕವಿಜಯದಿಂದ||

ಪದ|| ಭೀಮಪದನಮಿತಸುತ್ರಾಮಬೃಂದಾರಕ | ಪ್ರೇಮಸದ್ಗು
ಣಗಣೋದ್ದಾಮಗೌರೀವದನ| ತಾಮರಸಸಾಹಸ್ರಧಾಮವರಲೋ
ಕಾಭಿರಾಮಧೃತಸೋಮಜಯತು|| ಕಾಮಸರ್ವಾಂಗನಿರ್ಧೂಮಘ
ನಕೈಲಾಸ| ಧಾಮಸಲೆಸನ್ನುತಸುಶಾಮನಯನಾಗ್ನಿಜಿತ| ಭೀಮ
ಪಂಪಾವಿರೂಪಾಕ್ಷರಕ್ಷಿಸುನತಸ್ತೋಮಮಂಲೀಲೆಯಿಂದಂ||೧|| ಪ್ರೀ
ತಿಯಿಂದಾಶ್ರಿನೆಲೆಸಿದ್ಧರಾಮೇಶ್ವರಮ | ಹಾತಿಶಯವಿಕ್ರಮದೊಳ್

ಗ್ಪಾಲಂಕಾದಲ್ಕೆ। ತೀತಕೋಪದೊಳೆದಿಕ್ಪಾಲಕರ್ಮ್ಮಂಕೊಂಡುಕೈಚ
ಳಕದಿಂದೆಸುತಿರೆ॥ಶಾತಕುಂಭವಿಚಿತ್ರಮಾರ್ಗಣಂಗಳ್ಕರಿ। ವ್ರಾತಮಂ
ಜೋದರಂತುರಗಮಂ ತೇರ್ಗಳಂ। ಸೂತರ್ಕಳಂತುಂಡುತುಂಡಾಗಕ
ತ್ತರಿಸುತಿರ್ದ ವೇಂವಂಣಿಸುವೆನು॥೨॥ ತೊಟ್ಟಕಣೆಯೊಂದುಕರ್ಣಂ
ಬರಂತೆಗೆತೆಗದು। ಬಿಟ್ಟಕಣೆಗಳ್ಕ್ರೂರರಾತಿಸೈನಿಕದೊಳಗೆ। ನೆಟ್ಟಕಣೆ
ಗಳ್ಪಾಸಿರಂಲಕ್ಷಕೋಟಿಶತಕೋಟಿಪದ್ಮಂಗಳೆನಿಪ॥ ಕಟ್ಟಣೆಗಳಂವಿಸಾ
ರಿಪೆಟ್ಟಿದವುಮಾರ್ಗ್ಗಲದೊ। ಳಿಟ್ಟಣಿಪೆರಂ ಬಿಡದೆಕೊಟ್ಟಿದವು ತನುಗಳಂ।
ತಟ್ಟಿಪಿಟ್ಟಿಕಂಡವಂಕಟ್ಟಿದವು ದಿಕ್ಪಾಲರಾಗ್ರ್ದಿಸುವಬಾಣಂಗಳು॥೩॥ ಎ
ಚೆಟ್ಟಿಡುತ್ತರಿಸಿಕತ್ತರಿಸಿಕಡಿದರಿದುನ। ಟ್ಟುಕ್ಕಿಳಿಸಿಪಾಯ್ದು ಪೊಯ್ತು
ರೆಯುಟ್ಟಿಮುಟ್ಟಿಕಡು। ಚೆಚ್ಚರದೆತೂಳ್ದುಸೀಳ್ದಾವರಿಸಿಡಾವರಿಸಿಹೇವ
ರಿಸಲಿಹತರ್ಕ್ಕಳಂ॥ ಅಟ್ಟಿರಿಯೊಳೊಡನೊಡನೆಕಂಗಡಿಸಿಬೆಂಗಡಿಸಿ। ಕೊ
ಟ್ಟಿಕೋದೆತ್ತಿಸುತ್ತಿಸಿಕೊಡಹುಕೆಡಹುನೆರೆ। ಹುಚ್ಚುಮಾಡಿದನಾಡಿದ
ವುಕಾಡಿದವುಬಲದೊಳಾಶಾಧಿಪರಕಣೆಗಳು॥ ಕಡಿದುಡಿದತೋಳ್ನ
ಗದುಕೆಡವುತಿರ್ದವುಬೀಳ್ವ। ತೊಡೆಯತುಂಡುಗಳೇಳ್ದುಬಡಿವುತಿರ್ದ
ವುಮುಂಡ। ವೊಡನೊಡನೆತೆಗದೆಸವುತಿರ್ದವು ರೆಪರಿದತಲೆಗಳುಬೊ
ಬ್ಬಿಡುತ್ತಿರ್ದವು॥ ಕಡುಗಣ್ಗಳ್ಗಂತುಮಡಿವುತ್ತಿರ್ದರೊಡನೆಬೆಂ। ಗೊ
ಡದಖಿಳಬಲವಳಿವುತಿರ್ದುದೇನೆಂಬೆನಾ। ವಡಬನಂತಾಗಿಬಯಲಪ್ಪಕ
ರಧಿಯತೆರೆಗಳಂತೆದಿಗಧಿಪರಿದಿರೊಳು॥೪॥ ಬತ್ತಿದುದುಮುಂಗಡಿಯ
ಸೇನಾರ್ಣವಂಮುಂದ। ಕೊತ್ತಿದುದುದಿಕ್ಪಾಲಬಲವಡಸಿ ಖೋ
ಯೆಂದೆ। ನುತ್ತೊಡನೆಬಲನಮುಚಿಜಂಭಮುಂದುಭಿಮುಪಾನಾಭಗಜ
ಶಿರಸೂರ್ಪಕ॥ ಮತ್ತೆವೃತ್ರಾದಿಖಳರಾಪ್ರಳಯಸಮಯದವ। ಹೊ
ತ್ತುಂಗಮೇಘಾಳಿಗಳ್ಕರೆವಮಳೆಗಳೆನೆ। ಲತ್ತಲುಂದಿಕ್ಪಾಲರಂತರುಬಿ
ಶರವರುಷಮಂಕರೆದರೇನೆಂಬೆನು॥೫॥ ಸುರಪನಂನಮುಚಿಯುಗ್ಗಿ
ಯನಾಬಲಂದಂಡ। ಧರನಾಜಂಭಂನ್ಸನಾಗನವನಾಹಸ್ತಿ। ಶಿರನ
ಬ್ಧಿಪಾಲನಂದುಂದುಭಿಜಗತ್ಪ್ರಾಣನಂಶೂರ್ಪಕಂಧನದನಂ॥ ವರಮ
ಹಾನಾಭನೀಶಾನನಂವೃತ್ರನತಿ। ಭರದೊಳಿದಿರಾಗಿಕಾದುತಿರ್ದ್ದರಿತ್ತ
ಲಾ। ಪುರುಹೂತನೆಟ್ಟಬಾಣಂಗಳಂಕತ್ತರಿಸಿನಮುಚಿಬಳಿಕಿಂತೆಂದ
ನು॥೬॥ ಎಲವೊ ಸುರಪಾಲನೂರಾರ್ಸೂರ್ಗಳೊಳಂನಿನ್ನ। ಕೋಲಿಗೊಳ್ಳೆ
ದುಳುಹಬಿಟ್ಟುದನರಿದುಮತ್ತೆನ್ನ। ಕಲಹಕಿದಿರಾದೆನೀಂವೆರಸಿದ
ಕ್ಪಾಲರನಿಬರಶಿರಸ್ಸುಗಳೆನಿನ್ನು॥ ಕಳೆದುಕೊಂಬುದಕಿದೇಸಂಚ
ಕಾರಂಕಡೆಗ। ತೊಲಗದಿರುಕೊಳ್ಳೆನುತ್ತೊಂದುಬಾಣದೊಳೆತೋ। ಳ್ಗ

ಳನೆಚ್ಚು ಬೊಬ್ಬಿರಿಯಲಿಂದ್ರನು ಮಹಾಕೋಪದಿಂದವಂಗಿಂತೆಂದನು
ಏನೆಲವೊ ಕಳ್ಗಡುಹಿತನದಮಾತಿದು ನಿನಗೆ। ತಾನುಚಿತವೇ ಬಗುಳೆ
ದಿರುದನುಜಹಸ್ತಿಪಂ। ಚಾನನಶಿವಂ ಬೆನ್ನೊಳಿರ್ದಪಂ ನೀಂಬೆರಸಿ
ಯಂಧಕಾಸುರಾರಿಯಾದಿ॥ ದಾನವರಮಾಂಸವಂ ಕಾಕಜಂಬುಕಪಿ
ಶಾಚಾನೀಕಕುಣಿಸುವೆಂ ನೋಡೆನುತ ಬಾಣಸಂಧಾನದೋಳ್ಬಳನ
ರಥತುರಗಸಾರಥಿಧನುಗಳಂ ಕಡಿದು ಬೊಬ್ಬಿರಿದನು॥೯॥ ಮತ್ತೊಂದು
ರಥಕಡದಾರ್ಬಳಿಂ ರೋಷಾಗ್ನಿ। ಪೊತ್ತಿ ಕಿಡಿಗೆದರಿ ಭುಗಿಲೆಂದೊಡನೆ
ದೇವೇಂದ್ರ। ಸುತ್ತೆನಾಂಗದಮಕುಟಕಾಂಚ ಕಾರ್ಮುಕವರೂಥಾಶ್ವ
ಸೂತಾದಿಗಳನು॥ ತತ್ತರಂದರಿಯೆ ಪೊಸತೇರ್ಗಡರ್ದಿಂದ್ರನವ। ನೆತ್ತಿದ
ಪತಾಕಚಾಮರತುರಗಸಾರಥಿಗ। ಳುತ್ತಮವರೂಥಮಂ ತರಿದು ನ
ಮುಚಿಯ ಮನೋಗರ್ವಮಂ ಮುಗ್ರಿಸಿದನು ॥೧೦॥ ನಿಮಿಷದೊಳು
ಪೊಸರಥಕಡರ್ದೆಸುವನಾ ದನುಜ। ನಮರಪತಿ ತರಿವನಾ ತೇರಂ ಬಳಿ
ಕ್ಕಂತು। ಕಮದೊಳ್ವರೂಥಮಂ ಗಣಿತಮಳಿದೊಡಂ ಮತ್ತೆ ಕಾದುತಿ
ರೆರುದ್ರಾಸ್ತ್ರದಿಂ॥ ನಮುಚಿಯ ಶಿರಃಖಂಡನಂ ಮಾಡಿ ಸೇನೆಯಂ। ಯ
ಮನಗರಿಗೈದಿಸಲು ಕೇಳಿ ಬಲನಗ್ನಿಯಂ। ಭ್ರಮೆಗೊಳಿಸಿ ಕೆಡಹಿ ಸುರ
ಪಾಲನಿದಿರೊಳು ನಿಂದು ಕಣೆಗರೆವುತಿಂತೆಂದನು॥೧೧॥ ತಾಳ್ದಿವಿಜಬೂ
ಳನೀಂ ನಮುಚಿಯಂ ಕೊಂದು ನಾಂ। ಬಾಳ್ದಪೆನೆ ನಲ್ಬೇಡಂ ನಿನ್ನೊಡೆ
ಲನೀಕ್ಷಣಂ। ಸೀಳ್ದೆತ್ತಿದಪೆನವನಪಗೆಯನೆಂದಂಬಿನಂಬುಧಿಯಂ ತು
ಳುಂಕುತಿರಲು॥ ಪೂಳ್ದವು ದಿಶಾವನಿ ನಭೋಮಂಡಲಂಗಳುಜ। ಗುಳ್ದ
ವಾ ತಾರಾಗ್ರಹಾಳಿಗಳು ಚಣದೊಳ್ಮು। ಗುಳ್ದನಿತವಂ ಕಡಿದು ಕಣಾರ್ಗಂ
ತಕಂಬುದೊಟ್ಟೆಂದ್ರನಸುರಂಗೆಂದನು॥೧೨॥ ಬಾಯ್ಗೇಡಿತನದೊಳೇ
ನೆಂದಾದೊಡಂ ಜರೆದು। ಬಯ್ಗವೇ ಪಟುಭಟರ್ಕ್ಳೇಡು ನಿನಂ ಪಡೆ
ದ। ತಾಯ್ಗತವಮರಣಮಂ ಕೇಳಿಪೆನ್ನಮುಚಿಗಳಲುವೆಯೇಕೆ ನಿಂ
ನಾಕ್ತನ॥ ಮಯ್ಗಳೊಂದಪ್ಪಂತು ಗೈದಪೆನೆನುತ್ತ ಪದಿ। ನಯ್ಗಣೆಗಳಿಂ
ಬಲನಕಾಯಮಂ ಸೀಳೆನಿಡು। ಸುಯ್ಗಳಿಂ ಪೊಗನೆಗೆಯಲೊಂದಂಬಿ
ನಿಂದಿಂದ್ರನಿಟಲಮಂ ಬಲನೆಚ್ಚನು॥೧೩॥ ಕಣ್ಮುಚ್ಚಿ ಮೆಯ್ಮರೆದ ನರಘ
ಳಿಗೆ ಬಳಿಕೆಚ್ಚ। ರುಣ್ಮದುದು ಸುರಪಂಗೆ ರೋಷಾಗ್ನಿ ಪುಟನೆಗೆದು। ಪೊ
ಣ್ಮದುದು ಭಲರೆ ಬಾಪುರೆ ಬಲಾಸುರ ನೀನೆ ಜಗದ ಬಿಲ್ಲಾಳ್ಗಳೊಳಗೆ॥
ಜಾಣ್ಮೆಯುಳ್ಳವನಪ್ಪೆಯಾದಡೀ ಸರಳಸವಿ। ಗಾಣ್ಮಗುಳ್ದನುತೆ
ಕವಲಂಬಿನಿಂದೆಚ್ಚೊಡಾ। ಗೋಣ್ಮೊದಲ್ಕತ್ತರಿಸಿತವೆ ಮುಂಡಮು
ಳ್ದಾರ್ಬಲಂ ಮಾಡಿದನಾಕ್ಷಣದೊಳು ॥೧೪॥ ಬುಲ್ಲವಿಸಿತಮರಬಲವೊ

ಡನೆದೆಸೆದೆಸೆಗಳ್ಗೆ । ಚಲ್ಲಿದುದುಖಳರಬಲನೀವಾರ್ತೆಯಂಕೇಳಿ।
ನಿಲ್ಲದೀಶಾನಯಮನರಮೂರ್ಛೆವಡಿಸಿಘುಡುಘುಡಿಸಿಘನರೋಷ
ದಿಂದ ॥ ಎಲ್ಲಿಬಲನನ್ನಮುಚಿಯಂಕೊಂದನಂತೋರಿ । ಸಲ್ಲಿಯವ
ನಂಸೀಳ್ದದಿಗುಬಲಿಯನೀಯಬೇ । ಕಲ್ಲದೀಬಾಳ್ವದೇಕೆನುತಿಂದ್ರ
ನಂವೃತ್ರಜಂಭರಾರ್ದಟ್ಟರಂದು॥೧೫॥ ಪರ್ಬಿದವುದೆಸೆದೆಸೆಗಳಂಖಳ
ರಬಾಣತತಿ। ಯಾರ್ಬಣ್ಣಿಸುವರವರಪೇರ್ಮೆಯಂನೋಡಿಬಳಿ। ಇ
ರ್ಬರೆಡಬಲದೊಳೊಂದೇಭಾರಿತೆಗೆತೆಗೆದೆಸುತ್ತಿರಲು ಸುರಪನಂದು
ಒರ್ಬೊರ್ಬರೆಸುಗೆಯಂಕತ್ತರಿಸುತಂಮರ। ಳ್ದಿರ್ಬಲದಸುಭಟರೀಕ್ಷಿ
ಸೆಬೆಳೆದವತ್ತಿತ್ತ। ಪೆರ್ಬೆಟ್ಟದಂತೆಕಡಿದಂಬುಗಳರಾಸಿಗಳ್ಪೇಳಲೇನ
ದ್ಭುತವನು ॥೧೬॥ ಒಮ್ಮೆಮರಕ್ಕಸಸರ್ವ್ಯಮರೆಯೆಹಾಯೆಂದು।
ಹಂಮ್ಯೈವುದವರಪರಿವಾರವಾಕ್ಷಣದೊಳಿಂ । ದ್ರಂಮೂರ್ಛೆಗೆಯ್ಯೆ
ಕಂಗೆಡುವುದೀಬಲಮಿಂತುಬಲ್ಪಿನಿಂಕಾದುತಿರಲು॥ ತಮ್ಮೊಳಾಖಳ
ರೊಬ್ಬರೊಬ್ಬರಂಮೂದಲಿಸು। ತಂಮುಗುಳೆದಿವ್ಯಾಸ್ತ್ರಮಗಡರಿಂದೆಸೆ
ಯಲಿಂ । ದ್ರಂಮಹಿಗುರುಳ್ದನಾಸೇನೆಯಂಜಂಭವೃತ್ರರ್ಕೊಲ್ಲುತಿ
ರ್ದರಂದು॥೧೭॥ ದಿವ್ಯಮಂತ್ರೌಷಧಂಗಳಶಿವಸ್ಮರಣೆಗಳ। ಸೇವ್ಯದೊ
ಳುಮೂರ್ಛೆತಿಳಿದೇಳ್ದಿಂದ್ರನಾಪ್ರಳಯ । ಹವ್ಯವಾಹನನಪರರೂ
ಪಾಗಿರಥಮಡರ್ದುಗ್ರಬಾಣಂಗಳೆರಡಂ ॥ ಸವ್ಯಾಪಸವ್ಯದೊಳುತೊ
ಟ್ಟೆಸೆಯೆಭುಗಿಲೆಂಬ। ನವ್ಯಸ್ಫುಲಿಂಗಸಂತಾನಧೂಮಂಗಳಿಂ । ಭೂ
ವ್ಯೋಮಮಿಡಿಯೆಬರುತಿರ್ದವಾಬಾಣಂಗಳತಿ ಭರದೊಳೇನೆಂಬೆನು॥
ಬಿತ್ತರಿಸಲಳವದನುಜರಸಾಹಸಂಮುಂದ। ಕೊತ್ತರಿಸಿಬರ್ಪಬಾಣಂ
ಗಳೆರಡುಂನಡುವೆ। ಕತ್ತರಿಸಲಿಳೆಗುರುಳ್ದವುಹಿಂದಣರ್ದಂಗಳಗ್ರದಶ
ರಂಗಳೊದಗಿ॥ ತತ್ತರಿಸಿಕಡುವೇಗದಿಂದಾಮಹಾಮದೋ। ನ್ಮತ್ತಖಳ
ವೃತ್ರಜಂಭರತಲೆಗಳಂಕಚ್ಚಿ। ಪೊತ್ತುರುಸಮುದ್ರಕಾಗಸಕೆತ್ತಿಬಿಸು
ಟವೆಲರಾಮಕಳಚ್ಚರಿಯನು॥೧೮॥ ಬೀಳ್ದವರಟ್ಟೆಗಳುಶೈಲಂಗಳು
ಳ್ವಂತೆ। ತಾಳ್ದುದುಭಯಮನಹಿತಸೇನೆಬಾಣಂಗಳಿಂ। ಪೂಳ್ಗಸೆಣ
ಸುವಭಟರನುಳಿದದಿಕ್ಪಾಲಕರುಸಂಹರಿಸಿವಿಕ್ರಮದೊಳು॥ಕೇಳ್ದ
ಸುರಪನವಿಜಯವಾರ್ತೆಯಂಸಂತಸದೊ। ಳಾಳ್ದಕೊಲತೊಡಗಿದ
ರುದೈತ್ಯರಂಕೇಳುತಕೆ। ರಳ್ದಕೇಸರಿಯಂತೆಖತಿಗೊಂಡುಶತಮಾ
ಯನಾಹವಕ್ಕನುವಾದನು॥೨೦॥ ಸೂಳೈಸಿದವುವಾದ್ಯನಿಖಿಳಮಾಖ
ಳನೊಡನೆ। ಮೇಳೈಸುತಸುರತತಿಕರದಬಿಲ್ವೆದೆಯಂಬ। ಡಾಳೈಸು
ತಾಗಶತಮಾಯನಿಂದ್ರನಸರಿಸದೊಳುನಿಂದುನಿನ್ನಕೊಂದು ॥ ಪಾ

ಳೈಸುವೆಂನಾಕಲೋಕಮಂಶೋಕಮಯಮಂ| ನೋಳೈಸಿಸುವೆನೆಲವೊ
ನಿನ್ನಬಲೆಯರ್ಗೆಪಿಡಿ| ಯಾಳೈಸುವೆಂನೆರದನಿನ್ನ ತೆತ್ತಿಗರನೆನುತಾ
ಖಳಂಕೋಲ್ಗರೆದನು||೨೧|| ನೂರಂಬಿನಿಂದಿಂದ್ರನಂಶಿಖಿಯನಂಬುಹ
ದಿನಾರರಿಂಯಮನನ್ಯೈದಿಷುಗಳಿಂನಿರುತಿಯಂ| ಮೂರಂಬಿನಿಂವರು
ಣಮರುತಧನದೀಶಾನವಸುಮನುಗಳೆಂಬಿನಿಬರಂ|| ಆರಾರ್ಶರಂಗಳಿಂ
ದೆಟ್ಟವರತನುಗಳಂ| ಡೋರೆನಿಸಿಯಶ್ವಸಾರಥಿತೇರ್ಗಳಂತಿರುವ| ನೇ
ರಿಸಿದಬಿಲ್ಗಳಂಕಡಿಕಡಿಗುಮತ್ತೆಮತ್ತೆಸುತಿರ್ದನೇವೇಳ್ವೆನು||೨೨
ಅತ್ಯುಗ್ರಖಳನರೂಪಂಕಂಡುಸುರಬಲದ| ಪತ್ಯೇಕರೆಲ್ಲರುಂಮೂ
ರ್ಛೆವಡೆದರ್ದುಷ್ಟ| ದಿತ್ಯಾತ್ಮಜರಬಾಣವೃಷ್ಟಿಯಿಂನೆನೆಯದವರಿಲ್ಲ
ವಾನಿರ್ಜರರೊಳು|| ಮೃತ್ಯುಪೊಕ್ಕಂತಾಯ್ತುಪೇಳಲೇನಾಖಳಾ|
ಘಾತ್ಯವಂಮಿಗೆಯಕ್ಷಸಿದ್ಧವಿದ್ಯಾಧರಾ| ದಿತ್ಯವಸುಮನುಕುಲಂಕಂ
ಗೆಟ್ಟುಬೆಂಗೊಟ್ಟುಭಯದೊಳೋಡುತ್ತಿರ್ದರು||೨೩|| ಸೋಲ್ವನೆತ್ತ
ರಸುರಿವಕರುಳನಡುಪಂಗದಬೆ| ಮಗ್ಗಾನಿಯಪರಿದೆಳೆವಮೃಜೋ
ಡುನೊಗದೊಳ್ಮ್ರ| ಸುರ್ವಬಿಡುಗುರುಳಬೆನ್ನೊಳುನಟ್ಟಸರಳತಬ್ಬಿ
ಬ್ಬಿಸವನಡೆನುಡಿಗಳ್|| ಬೇರ್ವರಿದಭಯದಪಿಂನೋಟದೊಣಮ್ಯಯ
ಕಡು| ಪಾರ್ವದೆಯಪೊಯ್ವಳ್ಳಿಗಳಪೊತ್ತನಾಚಿಕೆಯ| ಸರ್ವದಿಕ್ಪಾ
ಲರೋಟಂಗಾಣುತಜನಾಗ್ರಸಂದಾಳ್ದನಾಕ್ಷಣದೊಳು||೨೪|| ಸಂತೈ
ಸಿದಂಕೆಟ್ಟುಮುರಿದೋಡಿಬರ್ಪಮರ| ಸಂತತಿಗಳಂಸ್ವಸನ್ನಾಹ
ದಿಂದಾತ್ಮ| ಸಂತಾನಮಗಣಿತಮೆಂಡಂಬಲಂಬರೆಮಹಾಕೋಪದಿಂರ
ಥವಡೆದರ್|| ಪಿಂತಖಿಳಲೋಕಮಂಪೆತ್ತವಂಕೊಲೆಗಣಿಸ| ಲಂತಖಿಳ
ಮಾಗದಿಹುದೇನೆನಲುಬೊಮ್ಮನಾಂ| ತಾಂತಖಳರಂಕೊಂದುಕೊ
ಳುತಶತಮಾಯನಂತಾಗಲವನಿಂತೆಂದನು||೨೫|| ಘಡಫಡೆಲವೆಲವೊ
ತೊಲತೊಲಗುಲೋಕಂಗಳಂ| ಪಡೆದನೆಂಬಗ್ಗಳಿಕೆನಮ್ಮೊಡನೆಸಲ್ಲ
ದಾ| ಪಡಪನುಳಿದೆಟ್ಟರಿಕೆಯಿಂಕಾದೆನುತ್ತೆಟ್ಟಖಳನಶರಜಾಲಂಗಳಂ|
ತಡೆಗಡಿದುಶತಮಾಯನೆಂಬಹಂಕಾರಬಂ| ತಡೆದೆನೀನೆಮ್ಮಪೆಸರಳಿ
ಮೃತಂಯಿನ್ನಿನಗೆ| ತಡವಿಲ್ಲವೆಂದುಪೊಸಮಸೆಯವಿಶಿಖಂಗಳಂಪದ್ಮಾ
ಸನಂಕರದನು||೨೬|| ಆಚತುರ್ಮುಖನೆಟ್ಟಬಾಣಂಗಳಂಕಡಿದು| ಭೂ
ಚಕ್ರಮೆತ್ತದೆಸೆಯತ್ತನಭಮೆತ್ತತಾ| ರಾಚಂದ್ರಮಸ್ಸೂರ್ಯ್ಯಮಂಡ
ಲಂಗಳಗತಿಯದೆತ್ತಸಾನಾಭಾವದ|| ಈಚರಾಚರಮೆತ್ತಲಂಬುದಂ
ಬ್ರಹ್ಮಂಗೆ| ಗೋಚರಮದಾಗಲಾಶತಮಾಯಕರತಳಮ| ಹಾಚಾಪನಿ
ರ್ಮುಕ್ತಬಾಣಾಬ್ಧಿಬೊಮ್ಮನಂಮುಸುಕಿತೇಂವರ್ಣಿಸುವೆನು||೨೭||

ಮುಟ್ಟಿದಶರಂಗಳಂಕೞುಟ್ಟಿಕೈಯೊಡನೆಬಲ್ಗಟ್ಟಿದೆಯುಱುಳೆನರಥದಟ್ಟು
ನೊಗಗಾಲಿಗಳ| ನುಚ್ಚುಗಡಿದವನೆದೆಯನುಚ್ಚೞಿಸಲಂಬುಕಣ್ಮುಚ್ಚಿ
ಮೈಮರೆದುಱುಳೆನು || ಚಿಚ್ಚರದೊಳೇೞ್ದುಱುತಿಪೆಚ್ಚಿದಿವ್ಯಾಸ್ತ್ರದಿಂ|ದೆ
ಚ್ಚಿೞಿಡಾಬಾಣಮಂಕೞ್ಚಲಿವನಂಗೆಲ್ದು|ದಚ್ಚರಿಯೆ ತನಗೆನುತೆಮ
ಚ್ಚರದೆಮಾಯೆಯಂಬಿಟ್ಟಿದಂಶತಮಾಯನು ||೨೮|| ಪೆಸರದೇಂಶತ
ಮಾಯನವನಘನಮಾಯೆಂಬಂ| ಣಸಲಳೆವೆಕೇೞ್ದಿಗ್ಧರಾವ ತತ್ಕ್ಷಣ
ದೊಳಗೆ| ಮಸಿವಣ್ಣಮಾಯ್ತು ಬೊಮ್ಮಾಂಡಮಿನಶಶಿಕಿರಣಮುಡಗಿದ
ವುತಮುಮೆತ್ತಲುಂ|| ಪೆಸರಿಸಿದುದಾಬ್ರಹ್ಮನೆಸುವಪತ್ಯಾಸ್ತ್ರದೊಳಂ|ದೆಸ
ಕಮಂವಿಶಾರಿಮೈಮುಟ್ಟಿಗುದುಸಲೆಪಟ್ಟಿ| ಬಸವೞಿದರೆಲ್ಲರುಂಕಂಗೆಟ್ಟು
ಬಾಯ್ವಿಟ್ಟುಮರವಟ್ಟರೇವೇೞ್ವೆನು||೨೯|| ಪುಲಿಕರಡಿಪಂದಿಗಳುಘ
ಣಮುಹಿಷವೃಕಗಂತಿ| ಬಲಪಿಸ್ತ್ರಶರಭಭೇರುಂಡಾದಿಖಗಮೃಗದ|ಬ
ಳಗನ್ನೆಗಳ್ಮೊಸಳೆಕರ್ಕಟಕತಿಮಿತ್ರಿಮಿಂಗಳಮಾದಿಜಲಚರಾಳಿ||ಮು
ಳಿಮಿಂಚುಬರಸಿಡಿಲ್ಬಿರುಗಾಳಿಧೂಳಿಸಕೆ| ಚಳಿಕಿಚ್ಚುಪೊಗೆಯುಸ್ತ್ರಶ
ಸ್ತ್ರತತಿಪೇರ್ಗುಂಡು| ಪೋಳ್ಭೂತಭೇತಾಳಕುಲಮೊಗ್ಗಿಮಡವಿಡದೆ
ಬಲಮನುರೆನೋಯಿಸಿದವು||೩೦|| ಎತ್ತೆತ್ತಲುಂಪಲ್ಲಕೊಳ್ಳಮುಳ್ಳಿವ
ನಿತಳ| ಮತ್ತೆತ್ತಲುಂಘಟ್ಟಬೆಟ್ಟನಟ್ಟಡವಿಗಳು| ಮೆತ್ತೆತ್ತಲುಂಪಿರಿಯ
ಕಂಮರಿಯದರಿಯಭೀಕರಗಂಡಗಂಹರಚಯಂ|ಎತ್ತಲುಂಲಯಕಾ
ರಿಮಾರಿಭೂರಿಪಿಶಾಚ | ರೆತ್ತಲುಂಬಿಸಿಮುಂಡಕೊಂಡಕಂಡದಮುಳೆ
ಗ| ಳೆತ್ತಲುಂಘೋರಸಂಹಾರಕೂರಮೃಗಾಳಿಯುದ್ದುದೇಂವಣ್ಣಿಸುವೆ
ನು||೩೧|| ಪಿಡಿವನುಂಗುವಸೀೞ್ವತೊೞ್ವಪ್ಪೊೞ್ವರಿವನರೆ| ಕಡಿವಕೊ
ಚ್ಚುವತಿವಿವಕವಿವಕಿವಿಯೊಳೆ,,ಬೊ| ೞ್ಬುಡುವಪೊಂಚುವಪಾಯ್ವ
ಪೊಯ್ವಕೊಯ್ವಳೆವತುೞಿಪ್ಪೊಳೆವಮುೞಿಮಾಗಸಕ್ಕೆ||ಇಡುವೆಸುವ
ತರಿವಿರಿವಕೊರೆವಬಿಸಿನೆತ್ತರಂ| ಕುಡಿವಕಚ್ಚುವಪೀರ್ವಕಾರ್ವಮಾ
ರ್ವರೆಗೊಲೆಯ | ಗಡಣ. ಗಳಿಂನೋವಬೇವಸಾವನಿಬರಂಪದ್ಮಾಸ
ನಂಕಂಡನು ||೩೨|| ಬೆರಗಾಗಿಕಮಲಭವನಿವನವಮಾಯೆಯನೊಂ
ದು| ತೆರದೊಳಪಹರಿಪೆನೆಂಬಸಿತರೊಳುಶತಮಾಯ| ನುರುಬಿಕಂಗ
ೞಿಗೆಕಾಣಸಿಕೊಳ್ಳದೆಡಬಲಂಪಿಂದುಮುಂದೆಲ್ಲೆಡೆಯೊಳು || ಕರದನಂ
ಬುಗಳನವನರಿಯಿಸಿಡಿಲಂತದಂ| ಮುರಿಯೆಗಿರಿಯಂತದಂತರಿಯೆಕ
ಡಲಂತದಂ | ಸುರಿಯೆಮತ್ತೊಂದೊಂದುತೆರದೊಳೆಡೆವಿಡದೆಬಂದೆರ
ಗಿದಂವಿಕ್ರಮದೊಳು ||೩೩|| ಈಸಕಲಸೃಷ್ಟಿಕರ್ತನಧುರಕೆನಿಲ್ವ
ರುಂ| ಟೇಸಮಾನಂಕಾದಿಕಾದಿಶತಮಾಯನುರೆ | ಬೇಸತ್ತುಡೆದಂ

ಬರಾಂಕಣದೊಳಿರ್ದ ಬಲ್ಗತ್ತಲೆಯನೊತ್ತಿ ಕವಿಸಿ॥ ಮೋಸದೊಳು ಬಿ
ಲ್ಲಂಬುಗಳೆಸದ್ಗ ಪುಟ್ಟಿಗಂ। ತೋಸರಿಸದೆಸುತಿರ್ದನಂತ್ಯಕಾಲದ ಮೋ
ಘ। ಮೇಸಾಣೆವಿಡಿದಂಬುಮಳೆಗಳಂ ಕಳವ ದೆನೆ ರಾಮು ಕೇಳದ್ಭುತ
ವನು॥೨೪॥ ಬಾನಿಂದಲೆತ್ತೆತ್ತಲುಂ ಕರೆವ ನಿಡುಸರಳೆ। ಸೇದೆಯಿಂದೆ
ಲ್ಲರುಂ ಮೂರ್ಛೆವಡೆದರು ಬೊಮ್ಮ। ನೇನಾದನೆಂದರಿಯೆ ನರೆಜಾವ
ಮನಿತರೊಳಗವನೆಸುವ ಬಾಣಂಗಳಂ॥ ನಾನಾಪ್ರಕಾರಗಿಂ ಕಡಿದು
ಮವನೆಡೆಗೆಸಂ। ಧಾನವಂ ಮಾಳ್ಪಬಗೆಯಂ ಕಾಣದೀಶ್ವರ। ಧ್ಯಾನ
ದಿಂದರಿದೊಡನೆ ಪಳಯರುದ್ರಾಸ್ತ್ರಮಂ ಸರಸಿಜಭವಂ ತೆಗೆದನು॥೨೫
ಬತ್ತಳಿಕೆಯಿಂದುಗಿಯಲಾ ಮಾಡುಗಳ್ಗೂಡಿ। ಕೆತ್ತ ತಮಮುಡಗಿಗು
ದುಹೆದೆಯೊಳ್ತೊಡರ್ಚಲೆ। ತ್ತೆತ್ತಲುಂ ಬ್ರಹ್ಮಾಂಡಮುರಿದುದಾ ಬಾ
ಣಮಂ ಕಿವಿವರೆಗತೆಗೆದು ಬಿಡಲು॥ ಮತ್ತೆ ನಭದೊಳಗೆಸೆವ ಶತಮಾ
ಯುಕಂಠಮಂ। ಕತ್ತರಿಸಿ ತಲೆಮುಂಡಮುರಡನುಂ ಕಡಲೇಳೆ। ರತ್ತಮ
ರುಭೂಮಿಗಿಟ್ಟುದು ಬೀಳ್ವ ಭರಕದೇನಾಯ್ತೊ ಭೂತಳವೆಂದನು॥
ಝುಲ್ಲೆಂಗುಸುರಕುಸುಮವೃಷ್ಟಿಕರೆಯಲ್ಕೆ ಮಾ। ಗ್ಗಲ್ಲಭನಸಿರಿಮುಡಿ
ಗೆದೈತ್ಯಸೇನಾರ್ಣವಂ। ತಲ್ಲಣಿಸಿದುದು ಬೇಸತ್ತಸರುಸರಿದರಲ್ಲಲ್ಲಿ
ಬಳಿಕಾ ಬ್ರಹ್ಮನು॥ ಬಿಲ್ಗೊಳೆಂಬಂತೊಟ್ಟು ನಡೆಮುತ್ತಿರೆ ಕಾಳಗದ ಗೆಲ್ಲ
ದೊಳು ದಿಕ್ಪಾಲವಸುಮನುಗಳಾದ್ಯಂತ। ರೆಲ್ಲರೊತ್ತಿದರಳಿದುದಗಣಿ
ತಬಲಂಬುಳೆರಸೇನೆಯೊಳ್ನಿಮಿಷದೊಳಗೆ॥೨೬॥ ವಿಕ್ರಮದೊಳೊ
ತ್ತಿಮಾಬ್ರಹ್ಮನಂ ನಿಲಿಸುವಸ। ರಾಕ್ಷಸಿಗಳೋರ್ವರಂ ಕಾಣೆನಾಖ
ಳಸೈನ್ಯ। ಚಕ್ರಪತಿಯು ಶಿವನಾ ಶುಂಭಾಸುರಂ ಕೇಳ್ದು ಖೇದಸಂಯು
ಕ್ತನಾಗಿ। ವಕ್ರಮಾದು ದೆಸಮುರಜಯುಮನುತೆ ವಿಗ್ರಹೋ। ಪಕ್ರಮಾ
ವೇಶದಿಂ ತನ್ನ ಬಲಸಹಿತಂದ। ತಿಕ್ರಮಿಸಿನಡದೆ ಸಾದಾನವಂ ಮಾನ
ವಂ ನೀಗಲಿದಿರಾಂತಭಟರು॥೨೭॥ ಮಾರ್ಗಬಳದೊಗ್ಗೆಗರುತೆಗದೋ
ಡಜೆದೆಯುಕೆ। ಚ್ಚಿರ್ದ ಮಗ್ಗರಳಿ ಕಾಳಗಕೆ ನುತೆ ಕಡು ಪಸಿಗ। ಶಾರ್ದೂಲದಂ
ತೆ ಶುಂಭಾಸುರಂ ರಥವಡರಿ ನಡೆಯೆ ಕಂಡ ಜಮುನ್ಯಾರು॥ ಇದ್ದರೆಲ್ಲಗ
ರಂ ಪೊಡೆದಂತೆ ದುರ್ಜಯಂ। ಪೊರ್ದಿದುದು ಸುರಬಲಕೆ ಶುಂಭಾಸುರಂ
ತುಡುಕೆ। ಪೊರ್ದರೊಡೆಯು ನರಿಣವನೀಗಿ ಗರ್ಬ್ಬೀಗಿದರಾಗಿದ ಕರ್ಗಂಡ
ಕಡೆಗೆ॥೨೮॥ ನೋಯನೊಂದಂ ಬ್ರಹ್ಮನಿಂದ್ರ ಸೊಡಲೊಳಗೆ ಪ್ರಾ। ರಾ
ಯುಮಾಯ್ತೇರು ತದ್ದಿಕ್ಪಾಲರೆಲ್ಲರುಂ। ಘಾಯದಿಂ ಮೂರ್ಛೆವಡೆದ
ರ್ತ್ರಿಣೇತ್ರರೇನಾದರೆಂದರಿಯೆ ನಾಹವದೊಳು॥ ಖೋಯೆಂದು ತುರುಬಿ
ದಖರ್ಗಳರಜೇಂದ್ರಾದ್ಯರಪ। ಲಾಯನದಹೇವಮಂ ಕಂಡನೀ ವಿಷ್ಣು

ರೋ। ಷಾಯಮಾನಸನಾಗಿ ಸರ್ವಸನ್ನಾಹದಿಂ ಶುಂಭಂಗೆ ಮಾರಾಂತ
ನು॥೪೦॥ ಸಾರ್ತನಗಿದಿರ್ಬ್ಬನಿಂ ಬಾಳ್ವನೇ ನಿನ್ನನೈ। ನೂರ್ತ್ತುಂಡುಗೈ
ದು ಬಲಿಗೆರವೆನೆನಗಾಂತುದುಂ ಬಾರ್ತರಾದರ್ಗ್ಗಿನ್ನವಂದಿಗರು ಪೋಗೆ
ನಲ್ವಿಷ್ಣುವತಿಕೋಪದಿಂದ॥ ಆರ್ತನಗೆ ಸರಿಯೆಲವೊ ಸಾಯಬೇಡೆನು
ತವನ। ತೇರ್ತ್ತುಮುರ್ತ್ತುಪುರಾಗಲಿಚ್ಛ್ರವಸುಮತಿಗೆ ಕೆಂ। ನೀರ್ತ್ತುಳ್ಕಿ
ತುಳ್ಕಿ ದಂಕೃಗೆಡದೆ ಸಾಯಕಸಮುಗ್ರಮಂ ಶಾರ್ಙ್ಗಬಳಿಕ॥೪೧॥ ಏಸ್ದ
ಳೆದು ನೊಂದ ಕಾಳ್ಪಂದಿಯಂತವನಾಧ। ನುಗ್ದಂಡಶರಮನೋರ್ಕೈಕ
ಗೊಂಡು ಘುಡುಘುಡಿಸಿ। ದೋರ್ದಂಡಮಂ ನೀಡಿ ವಿಷ್ಣುವಿನ ತೇರನಿ
ಡು ಬೊಂಗರಿಯೊಲ್ಲಿ ಭಕಿಡಲ್ಕ॥ ಸಾರ್ದು ಬೊಮ್ಮಾಂಡಮಂ ಬೀಳ್ವ
ರಥಮಂ ನಡುವೆ। ಮಾರ್ದು ಹರಿಪುಟನೆಗೆದು ಗಗನದೊಳು ಮೇಘದಂ।
ತಾರ್ದ್ದು ಶುಂಭನ ಮೇಲೆ ಬೀಳೆ ಈರ್ವರೆರ್ನ್ನಂ ಗುರುಳ್ದು ಮೂರ್ಛಿತರಾ
ದರು॥೪೨॥ ಕ್ಷಣದೊಳೆಚ್ಚತ್ತು ಕಡುವೇಗದಿಂದೀರ್ವರುಂ। ಮಣಿವರೂ
ಥಾರೂಢರಾಗಿ ಬಿಲ್ವಿಡಿದು ಮಾ। ರ್ಗಣಕೆ ಮಾರ್ಗಣಮೊಡನೆ ಘಾಯ
ಕಂ ಘಾಯಮುಳಿಲಿಂಗಳೆಚ್ಚ ತಿಗಬಾತಿ॥ ಸೆಣಸಿಂಗೆ ಸೆಣಸು ಮೂದಲೆಗೆ
ಮೂದಲೆಗಳಿಂ। ಹೆಣಗಿದರು ಶರ ಖಡ್ಗ ಪರಶು ಗದೆ ಚಕ್ರಕಂ। ಪಣಮು
ಷ್ಟಿಯುಬ್ಧಾದಿ ಸಕಲಯುದ್ಧಂಗಳಿಂ ಹೆರತೆಗೆಯದೋರೊರ್ವ್ವರು ॥೪೩॥
ನೀಲಪರ್ವ್ವತಮೆರಡು ಸ್ರೋರ್ಗ್ವಂತೆ ಸಂವರ್ತ। ಕಾಲಮೇಘದ್ವಯಂ ಸೆ
ಣಸುವಂತೆ ಮಹಾ। ಸ್ಥೂಲಾಂಗರೆಚ್ಚಾಡುತಿರಲೀರ್ವ್ವರವಯವದ ಘಾ
ಯಘಾಯಂಗಳೊಳಗೆ॥ ಮೇಲೆ ಮೇಲೊಸರ್ವ ನೆತ್ತರೊಳದ್ದು ಪೂತ ನಾ
ದ। ಪಾಲಾಶತರುಗಳೋಳ್ನೆದಜಾಜನಗಿರಿಯೊಲಾಲಕ್ಷ್ಮೀಯರ
ಸಶುಂಭಾಸುರರೊಪ್ಪಿರ್ದರೇನೆಂದೆಂಬೆನವರ ಧಟನು ॥೪೪॥ ಸಮನ
ಪ್ಪನಾ ಹರಿಗೆ ಶುಂಭನಾ ಶುಂಭಂಗೆ। ಸಮನೀ ಮಹಾವಿಷ್ಣುವೆಂದೆರಳ್ತೆಂ
ಡದವ। ರಮಮ ಮಹಭಾವೆ ನಲ್ಕಾದಿದರನೇಕಸತ್ವದ ಬಳಿಕ್ಕೆಂದೀ
ರ್ವರು॥ ಸಮರದೊಳು ಸರಿಯಾಗೆ ಶುಂಭನತಿಕೋಪದಿನ। ಸಮಬಾ
ಣವೊಂದರಿಂದೆದೆಯನೆಚ್ಚೊಡೆಶಿರೋ। ಭ್ರಮಣದೊಳು ಮೂರ್ಛೆ
ಸಿ ಮರಳ್ದೆಳ್ದು ವಿಷ್ಣು ದಿವ್ಯಾಸ್ತ್ರದಿಂ ಕೆಡೆಯೆಚ್ಚನು॥೪೫॥ ಸರ್ಪಶಯನ
ನ ಬಾಣಹತಿಗವನ ಮುಖದೆಸೆ। ತ್ತ್ವರಿದು ದೆತ್ತಲುಂ ಸುತ್ತಲುಂ ಕೋ
ಪದಿಂ। ಕಂಪರ್ಸೋದರ ನಿಶುಂಭಾದಿಗಳು ವಿಷ್ಣುವಂ ತಮೆಮುತ್ತಲಾ
ಕ್ಷಣದೊಳು॥ ತೇರ್ಪ್ಪತ್ತಿ ಶುಂಭನಿದಿರಸ್ನೋಡಿ ಮುಳಿಸು ಮೂರಿರ್ಪ್ಪ
ತ್ತು ಮಡಿಯಾಗೆ ವಿಷ್ಣುವಂ ಕಾಣುತಿಂ। ನೋರ್ಪತ್ತುಬದುಕು ನೀಂ
ಕಾಚಿವೆನುತುಗ್ರಶಕ್ತಿಯಸಾರ್ದು ತೆಗೆದಿಟ್ಟನು॥೪೬॥ ಪೇರುರವನುಗಿ

ಹುದಾಶಕ್ತಿ ಸರಿವೈರಿಯುರೆದು। ತೇರೊಳಗೆ ಬೀಳ್ದ ನಿಸ್ಸಿಂದ ಬಾರದೆನು
ತೆವನ। ಸಾರಥಿಯುರುಳ್ದಿಡಂ ಪಾಳೆಯ ಕೆರಥವು ನಾಬ್ರಹ್ಮೇಂದ್ರರಳವ
ಳಿದರು॥ ಈ ರಾಕ್ಷಸಾಳಿ ಬೆಂಬತ್ತಿದುದು ನಿಡುಸರಳ್, ಸಾರದಂತೊಡೆ
ನಡುಕೊರಳ್ಪರಿದು ಕೂಡೆಸಂ । ಹಾರವಾಯ್ತು ಗಳ್ಳೈನೂರ್ಪದ್ಮ ಬಲ
ವುಳಿದುದೋಡಿ ಬೀಡಂ ಪೊಕ್ಕುದು॥೪೭॥ ಕರಿತುರಗರಥ ಶರಾಳಿಯುಂ
ನಿರಿಸಿ ಕೈಮಾಗಿದು। ಮುರಪುತ್ತಡವರ್ ಪ್ರುಗ್ಗಿಬೆಸೀರೆಲ್ವಾಕ್ಕುಸಲೆ। ಬೆ
ರಳುಗಳ್ಬಿಯೊಳಿಟ್ಟಿಯ್ಯ ಕಾಯೆಂದು ಕಾಲ್ಗುಗಬಹುದೆ ನ್ಯಾವರಾಂ
ತು॥ ಕರುಣವನೆ ಪಡೆದು ಕಳುಹಿಸಿಕೊಂಡು ಕಾಲ್ಬೀಗ। ವೆರಸತಿರು
ತಿರುಗಿ ನೋಡುತ ಪಾಳೆಯಂ ಬೊಗುವ । ಸುರರಸೇನೆಯು ಸಡಗರಂ
ಗಂಡು ಸೇನಾನಿಯುರಿದೆದ್ದ ಸಾಕ್ಷಣದೊಳು ॥೪೮॥ ಬಾಯನೊಡೆಬ
ಡಿವಾಸೆಗೀಳ್ಕುರುಳ್ಗೊಯ್ಯುಗ। ಲಾತ್ತಯೊಡೆತ್ತರಪೀವುದೇ ನಿಮಗೆ
ಹೊಯ್ಯಾಡಿ। ಸಾಯುಂಣೆಯುವಸುದೆಸುಡು ಸುವಸ್ತ್ರ ಬಾಳ್ಗಳನೆನು
ತ್ತೆ ಜರೆದ ಮರಕುಲಪುಂ॥ ಖೋಯೆನುತೆ ಬಪ್ಪಸುರರಂ ಕಂಡು ತೇ
ರೇರಿ, ಜೇಯನೇರಿಸಿ ಬಿಲ್ಲನೊದರಿಸುತೆ ವಳಯು ಹರ। ನಾಯುತಂದಾ
ಕ್ಷತ್ತ ಬಲಸಹಂಷಣ್ಮುಖಂ ತರುಬಿದಂ ಪರಬಲವನು॥೪೯॥ ಗಡಬಡಿ
ಸಿದುದು ಲಗ್ಗೆವರೆ ಕೋಟ ಪಗೆಗಳಂ। ಕೆಡಕೆಡೆಯೆನುತ್ತೆ ಕಹಳೆಗಳೊದ
ರೆ ಅಳ್ಳೆದೆಯ। ಧಡಧಡಂಗಳ್ಮುಣ್ಪದಮರಗರ್ ಹರಿಯು ಜರ್ಜರಹರಸಿ
ಧ್ಯೈತ್ಯದಿಂದ॥ ಒಡನೊಡನೆ ಹುರಗಟ್ಟಿಯುರುಬುವಸುರಾಳಿಯಂ । ತ
ಡತಡದು ಕಾದುತ್ತಿರ್ದರ್ ರ್ಜೃಂಭಸಿಷುಗಳಂ। ಕಡಿಕಡಿದು ಖಾತಿಯಿಂ
ದಾಷಣ್ಮುಖಂ ಸರಳ್ಗೊಟ್ಟುಮುತ್ತಿಂತೆಂದನು॥೫೦॥ ಸಾರಬೇಂಕಡಬೇ
ಡತೊಲಗು ಹವಿವಿಧಗಳಂ । ಗಾಯುಗಿಸಿದ ವಿಕ್ರಮಂ ಸಲ್ಲದೆಮಗೆ ವ್ಯೈ
ದೋರಿ ಕಾಟದ ದೈತ್ಯರೇನಾದರೆಂಬುದಂ ಪಿಂತ ನೀಂ ಕೇಳ್ದರಿಯಲ
ಕಾರಿಸುವೆನವರಂ ಜಯಿಸಿದುದನೆನುತಬಿ। ಲ್ಗಾರ ರಥದೇಸನೆಷ್ಟಂ
ಕರದ ಬಲ್ಬಿಲ್ಲ। ಶಾರಠಿಂ ಖಳನಸಾರಥಿ ರಥಾಶ್ವಂಗಳುಡಡೆಗೆಡೆಯಲೇ
ನೆಂಬೆನು॥೫೧॥ ತೇರ್ಮುರಿಯೆ ಪೊಸ ತೇರನಳವಡಿಸಶುಂಭನೈ। ನೂ
ರ್ಮಡಿಯ ಬೀರಡಂ ಪೊಸವುಸೆಯು ಕಣೆಗಳಂ। ಕಾಮುಕದೊಳೊಂದಿ
ಸಿಬಿಡಲ್ಕೆ ಶಾವನಿ ನಭೋಮಂಡಲಂಗಳೊಳೆಲ್ಲೆಯುಂ॥ ಕಾರ್ಮಳೆಗಳನೆ
ಕರೆದವನು ತುಮುನ್ನಿಮಿಸದೊಳ । ಗಾರ್ದ್ಮೊಗಂ ಕಡಿದವನ ಕೇತುಚತ
ಮರ ಕವಚ। ಧರ್ಮಸಾರಥಿವರೂಥಂಗಳಂ ಕಡಿದು ವಿರಥನವ ಮಾಡಿದಂ ಕ್ಷ
ಣದೊಳು॥೫೨॥ ವಿರಥನಾದಾ ಶುಂಭನೊಡನೆ ಗದೆವಿಡಿದು ಚೆ। ಟ್ಟರದೊ
ಳೊದಗಲ್ಕದಂ ಕಡಿಯಲಸಿವಿಡಿದು ನಿ। ಭರದೊಳೊದಗಲ್ಕದಂ ತರಿಯೆ

ತೋಮರಚಕ್ರಪರಿಘಮುದ್ಗರಮುಸುಂಡಿ॥ಪರಶುಮೊದಲಾದಬತ್ತೀ
ಸಾಯುಧಂಗಳೊಳ್ಪರಿವಿಡಿಯುಳೊದಗಲನಿತಂಬೇಗದೊಳ್ಮಹೇ।
ಶ್ವರಸುತಂತರಿದವನವ್ಯ್ರತುಂಬಘಾಯಮಂ । ಕಾಣಿಸಿದನೇನೆಂಬೆ
ನು॥ಇಂತುನಾನಾತೆರದಶಸ್ತ್ರಾಸ್ತ್ರಜಾಲಂಗ।ಳಿಂತಡೆಯುದೊದಗಿಗುಹ
ನಂಗದೊಳುಘಾಯಂಗ।ಳಂತಾಗಿಸಲ್ಕೆರೆಯುದಾತನಂಪಿಡಿದೆತ್ತಿನುಂ
ಗಿದಪೆನೆಂಬವನದ॥ಭ್ರಾಂತಿಯಿಂಮೇಲಾವ್ಯಯೆತಳೆಯನರಿವಾಬಾ
ಣ।ಮಂತೆಗೆದಿವಂಗಿರಿಜೆಯುಸ್ತ್ರಕ್ಕೆವಿಮಾಸಲೆಂ। ದಂತದಂಬಿಟ್ಟುಷಣ್ಮ
ಖನಾಗ್ರರ‌ಗಳಿಂಬುಳೆನುರವನೊಡೆಯುಚ್ಚನು॥ ನಿಲವಿನಿಂಕೆಡದನವ
ನನಿತರೊಳುಧೊರೆಬೀಳ್ವ। ನೆಲೆಲೆಕವಿಕವಿಯೆನುತೆಸುತ್ತಲೆತ್ತೆತ್ತಲ
ವ। ನಳಲಿಗನಿಶುಂಭಕುಂಭನಿಕುಂಭಶರಭಗಜಶಿರಕಪಿಲವೃಷಪರ್ವ
ರು॥ಬಲಿವಿಲೋಚನಪಾಕಬಾಣವಿದ್ರಾವಣಶ।ಬಲಶಂಖಶಿರವಜ್ರನಾ
ಭಮೊದಲಾಗಿರ್ದ।ಖಳರೊದಗಿಶುಂಭನಂಬೀಡಿಂಗೆಪ್ಪೊರಿಸಿಕಣಕಿದ
ರೊಡನೆಷಣ್ಮುಖನನು॥೫೫॥ಗಿರಿಯಬಳಗಂಮುತ್ತಿಕುಳಿಶಮಂಜು
ವದೆನವ। ಕರಿಯುಜಂಗುಳಿಯುರುಬೆಸಿಂಗಮುಳ್ಕುವದೆಮುದು।ನರಿ
ಯುಹಿಂಡುರವಣಸೆಪೇರ್ಬುಲಿಭಯುಂಗೊಂಬುದೇಸಿದ್ಧರಾಮುಕೇಳು
ತರತರದೊಳೆತ್ತೆತ್ತಲುಂಕವಿವರಕ್ಕಸರ।ನೆರವಿಷಣ್ಮುಖನಂತೆರಳ್ದು
ವ್ರದೆಕೊಡೆಸಂ। ಹರಿಸತೊಡಗಿದಸವಂಪ್ರಳಯಹರನಪರಾವತಾರ
ಮೆನೆಸಂಗರದೊಳು॥೫೬। ಇದಿರೊಳುರುಬಿದನಿಶುಂಭನನೆಚ್ಚುಬ
ಲದೊಳಿರೆ। ತ್ತಿದಕುಂಭನಂಬಡಿದುವಾಮದೊಳ್ಬಂದುತಾ।ಗಿದಶ
ರಭನಂಸಗೆಗುಬೆಂಗಡೆಯೊಳೆಸುವಬ? ಯುಂಕೆಡಪಿಮೇಲೆಮೇಲೆ।ಒ
ದಗುವನಿಶುಂಭಪಾಕರನಿಳಿಗುರುಳ್ಚಿವೋ। ಹದಶಬಲಶಂಖಶಿರವ
ಜ್ರನಾಭಾಬ। ಲ್ಕಗನಕರ್ಕಶದನುಜರಂಮೂರ್ಛೆವಡಿಸಿದಂಗುಹ
ನೊಂದುನಿಮಿಷದೊಳಗೆ॥೫೭॥ಮಡಿವರ್ಗಗಡೆಯಿಲ್ಲವಾಹನದಮೇ
ಗಣಂ। ಕೆಡವರ್ಗಮಿತಿಯಿಲ್ಲಘಾಯಂಗಳಿಂಮೂರ್ಛೆ। ವಡೆವರ್ಗೆಗ
ಣನೆಯಿಲ್ಲರೆಜೀವವಾಗಿಕ್ಕೈಕಾಲ್ಗಳುಡಿದರೆಗಂಗಳಂ॥ ಬಿಡುವರ್ಗಲೆ
ಕ್ಕವಿಲ್ಲೆಸುಗಯುರುಬೆಯೊಳೆದೆಗ।ಳೊಡವರ್ಗಮೇರೆಯಿಲ್ಲೆತ್ತಲುಂ
ಪರಿದುಬೆಂ। ಗೊಡವರ್ಗಕಡೆಯಿಲ್ಲಮೆನೆಮುರಿದುದಾಬಲಂಪೇಳ
ಲೇನದ್ಭುತವನು॥೫೮॥ ಬೆಂಬತ್ತಿದುದುವಿಷ್ಣುವಿಧಿಮುಖ್ಯದೇವ
ನಿಕ। ರುಂಬಮೆತ್ತೆತ್ತಲುಂಖಳರಾನೆಕುದುರೆತೇ। ರಂಬಿಟ್ಟುಕಂಗೆ
ಟ್ಟುಮತಿಯಳಿದುಧೃತಿಗುಂದಿಬಹುದೈನ್ಯದಿಂಕೈಗಳಂ॥ ತಂಬುಲಕೆ
ನೀಡಿಗಡ್ಡಂಮಿಸೆವೆರಸಿಬಸು। ರಂಬಂದಮುಕ್ಕಳಿಸಿನಿಮಗೆಂದುಭಟ

ಸಮೂ। ಹಂಬಿಡಿಸಿಕೊಂಡು ತಮ್ರಿಯಪಾಳಿಯುಂ ಬೊಕ್ಕದೇಸೆಂ
ಬಿನಟ್ಟರಿಯನು ॥೫೯॥ ಓಡುವಸುರಾಳಿಯುಂ ಸುರರಿರದೆ ಬೆಂಬತ್ತಿ।
ಕೂಡಿಪೊಕ್ಕರಾಪ್ಪಳಿಯಂಗಳಂಬಲು ಸೂರೆ ಮಾಡಿಗುಡಿಗೂಡಾರಮಂ
ಕೊಯ್ದು ತಮತಮಗೆ ಸೂಳೆಯರಸೆರೆಯ ಪಿಡಿದು ॥ ಮಾಡಿದರ್ಸಕ
ಲರ್ಗೆ ಭೀತಿಯಂ ಜಯದೊಳೋ। ಲಾಡಿದರ್ಬಿಂಕದಿಂ ಜಯಭೇರಿಯಂ
ಪೊಯಿಸಿ। ತಾಡಕೇನಾಷಣ್ಮುಖಂ ತಿರುಗಿದಂ ತಮ್ಮ ಪಾಳಯಕೆ ಸಂ
ಭ್ರಮದೊಳು ॥೬೦॥ ಇಂತೆಸವ ಚನ್ನಬಸವೇಶ್ವರಪುರಾಣಮಂ।
ಸಂತಸದಿ ಬರದವರ್ಗೋದಿದರ್ಗರ್ಥವಾ। ದ್ಯಂತಮಂ ಬಿಡದೆ ಪೇಳ್ದರ್ಗೆ
ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ ॥ ಸಂತತಂ ಸಕಲಸುಖಮಂ ಸಕ
ಲಭೋಗಮನ। ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ। ಕಂ
ತುಹರನಪರಾವತಾರನೆನಿಸುವ ಚನ್ನಬಸವೇಶನಕ್ಕರಿಂದಂ ॥೬೧॥

ನಾಲ್ಕನೆಯ ಕಾಂಡದಲ್ಲಿ ೯ನೇ ಸಂಧಿ ಮುಗಿದುದು.

ಅಂತು ಸಂಧಿ ೪೯ಕ್ಕಂ ಪದ ೨೦೫೯ಕ್ಕಂ ಮಂಗಳ.

## ⁜೧೦ನೇ ಸಂಧಿ⁜

ಸೂಚನೆ॥ ಧುರದೊಳಂಧಾಸುರಂ ಹರನೊಡನೆ ಕಾದಲಾ। ಪ
ರಶಿವಂ ಶೂಲದಿಂದಿರಿದೆತ್ತಿ ನುತಿಸಲತಿ। ಕರುಣದಿಂದವನ ಹೃದ
ಯಾಂಗಣದಿ ನಟಿಸಿ ಗಣಪದವಿಯಂ ಕೊಟ್ಟನೊಲಿದು॥

ಪದ॥ ಕಮಲನೇತ್ರಾಂಬಕಸುಪೂಜಿತಪದಾಂಭೋಜ। ಕಮ
ಲಗರ್ಭೋರ್ದಯಕುಮಾರಕಶಿರಶ್ಛೇದ। ಕಮಲಸಖಪುತ್ರಗಾತ್ರಾರ
ಣ್ಯಘನದಾವಕಮಲಕಮಲಾರಿಧರನೆ॥ ಕಮಲಮಿತ್ರಾಬ್ಜವಹ್ನಿತ್ರಿ
ಲೋಚನನೆಸೆವ। ಕಮಲಾಕುಮಾರದಹನೀಕೃತಸುಭಸಿತಾಂಗ। ಕ
ಮಲಾಪ್ತಕೋಟಿಪ್ರಕಾಶಜಯ ಪಂಪಾವಿರೂಪಾಕ್ಷ ಸುಜನರಕ್ಷ॥೧॥
ಘನಮಹಿಮ ಚನ್ನಬಸವಣ್ಣನಿಂ ಮುಂಗಥೆಯ। ನನುನಯದಿ ಪೇಳೆ
ನಲು ಸಿದ್ಧರಾಮೇಶಂಗೆ। ವಿನಯದಿಂ ಪೇಳ್ದನಾ ಸಮಯದೊಳಗಿನನ
ಪರಮಾರ್ಥಗಿಳಿದಂಭರದೊಳು॥ ನೆನದುರಣಭಂಗಮಂ ಸಕಲದೈತ್ಯರ್ತ
ಮ್ಮ। ಮನದಹಂಕೃತಮಳಿದು ದುಃಖದಿಂ ನೋವುತಿ। ರ್ಪಿನಮಂಧಕಾ
ಸುರಂ ಕರಿಸಿದಂ ಧೊರೆಧೊರೆಗಳಂ ಮಂತಣಂಗೆಯ್ಯಲು ॥೨॥ ಮುಸು
ಕದಲೆಗಳ ಪೋದಹಂಕೃತಿಯ ನಿಷ್ಕಳೆಯ। ಮುಸುಡುಗಳ ಮೆಲ್ಲಮೆ
ಲ್ಲನೆ ಬರ್ಪನಡೆಯ ಜಾ। ನಿಸುವ ಬಗೆಗಳ ಪೊತ್ತ ದುಗುಡಗಳ ಕೆಳಗನಿ
ಟ್ಟಪನೋಟಗಳ ಸನ್ನೆಯ॥ ನಸುಮಾತುಗಳ ನೇಳ್ದ ಸುಯಿಲ ನಾಂಚಿ
ಕೆಯ ಗುಹ। ನೆಸುಗೆಯಿಂ ಸೀಳ್ದ ಮೈಗಳ ಖಳರ್ಬಂದು ಮಂ। ಡಿಸಿದರೋ

ಛೋರ್ದ್ವರೋರ್ದ್ವರವುರೆಯೊಳತ್ತಿತ್ತ ವಿಸುಕದೇಂ ಪಣ್ಣಿಸುವೆನು ॥೩॥ ಭೋರ್ಗರೆಯುದೊಪ್ಪುವ ಸಮುದ್ರದಂತೊಂದರೆತ। ಳಿಗ್ಗದಲದಿರ್ಪವನ ದಂತೆಗಡಗುಡುವಾಣ್ದ। ಕಾರಗ್ಗಲದಭ್ರವಾಲಿಗಳೆಂತೆ ವು[illegible]ನವುಂತಾಳ್ದಾವುಹಾಸಭೆಯೊಳು। ದುರ್ಗರ್ದ್ವವುಳಿಡಭಟರಂ ಮಿತ್ರರಂಬಂಧು। ವರ್ಗಂಗಳಂ ನೋಡಿ ಬೇರೆಬೇರೆನಿಬರಪ। ಸರ್ಗಳಿಂ ಕರದು ಪೊರೆಯೊಳ್ಕುಳ್ಳಿರಿಸಿ ಯಂಧಕಾಸುರನವರ್ಗೆಂದನು ॥೪॥ ಚಿಂತೆಯೇತಕ್ಕಿರಿತ ಮುರಿತ ಮಿವ್ವಸಮರದೊಳೆ। ಗಂತಪ್ಪವೆಗಾರ್ದೊಡೆಂ ಬಪರ್ವೀವ್ಯಥಾ। ಭ್ರಾಂತಿ ಬೇಡೆಂದೆಲ್ಲರಂ ತಿಳುಪಿ ತನ್ನಾಪ್ತರಂ ಕರೆದು ವಿನಯದಿಂದ॥ ಪಿಂತಾದ ಕಾಳಗದೊಳೆಂ ವಿಜಯಾಪಜಯ। ಮಂತ್ರಿರ್ಕ್ಕ ಬಹು ಕಾಲವಾಯುತ್ತರಣವಾಪಗೆಯ। ನೆಂತು ಸಂಹರಿಸವೇಳ್ಕುಂ ಬುದಂತಿಳಿದಮುಗಪೇಳಿರ್ಪನೀವೆಂದನು॥೫॥ ಆವಮಾತನೆಲ್ಲರುಂ ಕೇಳ್ದುವನಂದಾಳ್ದು। ತಾವೋರ್ದ್ವರೊವರ್ದರವೊಗಂ ನೋಡುತಿರೆ ಮಹಾ। ಭೀಮಾಂಗನಾಗಗನವುರ್ಧ್ವಿರ್ಯಯಂಧಾಸುರನಸಮ್ಮುಖದೊಳೆದ್ದುನಿಂದು॥ ಈ ಮಹಾಸಭೆಯುವೀರರ್ಕಳಿರೆರಿಪುವಂವಿ। ರಾಮವೆನಿಪುದು ನಿಮಗೆ ಚೋದ್ಯಮಲ್ಲೆಂದೊಡೆಂ ನೀವು ನಕೆ ತೋರಿದುದನು ಸುರುವೆನಿದಂ ಕೇಳಿವೆಂದು ಮತ್ತಿಂತೆಂದನು ॥೬॥ ಅಂದು ಮೊದಲಾಗಿ ಪದಗೆನಸಮರದಿಂದೆಮಗೆ। ಬಂದುದಪಜಯವಾನಿಶಾಚರರ್ನ್ನೋಡಲದ। ರಿಂದಿರುಳ್ಗಳಗಂಜಯುಮಪ್ಪುದೆಮಗನವಿಮ್ಮ ಸರ್ವಶಕ್ತಿವೆರಸಿ ॥ ಇಂದುಜಯಿಸಿದಗಲ್ಲದೊಳ್ಕೃಗಳಂ ಮುರದು। ಸಂದಗವರ್ದೊಳೊರಂಗಿದ ಸಕಲದೇವತಾ। ವೃಂದವಂಕೊಲಲಳ್ಕು ಮಿದು ನಿಷ್ಟಯುಂ ಮನಕೆ ಬಪ್ಪೊರ್ಡೆಸಗುವದೆಂದನು ॥೭॥ ಸಕಹವೆಂದಂ ಶುಂಭನೊಪ್ಪಿದಂ ಶರಭನದ। ನಹುದೆಂದನಂಧಕಾಸುರನು ಳಿದರೆಲ್ಲರುಂ। ನರುಸಿಕೊಂಡರ್ಗ ಗನವುರ್ಧ್ವಿರ್ಮತವೋತವ್ಮ್ಯ ಮತವೆಂದು ತತ್ಕ್ಷಣದೊಳು॥ ಗಹಗಹಿಸಿದಂ ಪ್ರಹಲ್ಲಾದನರಿದರಿದುವುರು। ಳಶರಸುರೆಕಂಡು ಕಂಡಂ ಕಾಣದಂತಿರ್ಪ। ಮಹಿಷಸ್ವರೂಪರಂತಿಳಿಪಲೇಶಂಗವಶವಲ್ಲವೆಂದಿಂತೆಂದನು॥೮॥ ಶತಮಾಯ ಜಂಭಬಲನಮುಚಿವೃತ್ರರ್ಗವುಂ। ಪ್ರತಿಮಾನರುಂ ಟಿಸಮರದೊಳವವೋರ್ದಲಾದ। ರತಿಮಾನವುಡಗಿವುಡಿದರ್ಸತ್ತ ಬಲಕೆಗಡೆಗಾಣೆನೀರಕ್ಕಸರೊಳು ॥ ಕ್ಷತಮಾಗದವರದಾರ್ಪ್ರೋರಹಿತಬಲದೊಳಗೆ। ಹತಮಾದರಾರೆಣಸು ಬೇಗ ಶಿವನಡಿಗಳೆ। ನತನಾಗುವುಧುಪದಂ ನಂಬಿಕೆಡಬೇಡಪೇಳ್ದೆಂತ್ರಿವಾಚದೊಳೆಂದನು ॥೯॥ ಎನೆಕೇಳ್ದುಘುಡುಘುಡಿಸಿ ಕಂಗಳೊಳು ಕಿಡಿಗೆದರಿ। ಕನಲು ತಂಧಾಸುರಂ ನು

ಡಿದನಿವರಂತೆಯೆಂ। ಚನೆಗೆಕರೆದೆನೆನಿನ್ನ ನರಿಚಬೇಡೆಂದು ಪೆಹಲಾ
ದಸಂಚರಿದು ನುಡಿದು॥ ದನುಜಸೇನಾಪತಿತ್ವಕೆಗಗನಮೂರ್ಧ್ನಿಗೆ ಗು
ರೆ। ಮಸವೊಳಿದು ಮೂರ್ಧ್ನಾಭಿಷೇಚನಂಗೆಯ್ದಾಗೆ। ನೆನೆದಕಾರ್ಯ್ಯ
ಮನೆಸಗಿಯೆಂದು ಪೇಳೆಯುವಿತ್ತು ಕರ್ಗ್ಗೊಳಿಗೆಬೀಳ್ಕೊಟ್ಟನು॥೧೦॥ ಕರಿ
ಯುಘಂಟೆಗಳಕುದುರೆಗಳನಾಳಿಗೆಗಳಂ। ಸರಮುಣ್ಮದೊಲ್ಕೊಟ್ಟಪಂಚ
ಪ್ರೋತ್ರಿಸದೆಪರಿ। ಪರಿಯು ವಾದ್ಯಂಗಳಂಬಾಜಿಸದೆಗುಪ್ತದಿಂ ಸರ್ವಸನ್ನಾ
ಹವಾಗಿ॥ ಧೊರೆಧೊರೆಗಳೇನಡೆದು ಹೊಕ್ಕಂದಿನಲ್ಲಿತಮ। ಗೆರಡೆರೂ
ಳೆಗೊಂಡಾಗವೇಳ್ಕೆಂದು ಬಂದು ಪುರ। ಹರನಪಾಳೆಯುದಸುತ್ತ್ರಿತ್ತಲುಂ
ಮೋಹರಿಸಿನಿಂದರೇಂವರ್ಣ್ಣಿಸುವೆನು॥೧೧॥ ಎಲೆಸಿದ್ಧರಾಮಕೇಳ್ಬಳರ
ನುರೆನೋಯಿಸಿದ। ಗೆಲವಿನೋಳ್ಪರವೆಡಸೊಲ್ಲಮುಂಮುರಿದುತಾಂ
ಮಲಗಿದನ್ಪಕಲರುಂಮುತ್ತಲ್ಲಗಾಸುಳೆರು ಬೇಳೆವೆಯು ಬೂದಿಯೂದಿ॥
ತಳೆಬೇಳಿಬದ್ಧರಂಗಳಮುರಿದುಕೊಂಡೊಯ್ದ। ನೊಳಪೊಕ್ಕುಸುರ
ಹರಿಬ್ರಹ್ಮರಿಗಪಾಳೆಯುಂ। ಗಳೆವೇಳೆಬೀಳ್ಕೊಕೊಲತೊಡಗಿದರು ತೆ
ಮ್ಮಿಚ್ಛೆಯುಂಗದೇಂವರ್ಣ್ಣಿಸುವೆನು॥೧೨॥ ಮುರದೊರಂಗಿದರನಿರಿದಿರಿ
ದಾಂಕಿಕೊರ್ಳ್ಗಳಂ ಕೊರದೆಚ್ಚರೊಳಗೇಳ್ವರಂ ಮೆಟ್ಟಿಕಾಲ್ವಿಡಿದು।
ಸರಸರನೆಸೀಳ್ದರೆದ್ದೋಡುವರನಟ್ಟಿಪಿಡಿದೊತ್ತಿನಡುಕೈಕಾಳ್ಗಳಂ॥
ಮುರಿದಿಟ್ಟರೆತ್ತಾನುಮಿದಿರಾದೊಡಲ್ಗಳಂ। ತರಿತರಿದುಕತ್ತರಿಸಿಕೊ
ಚ್ಚಿತುಂಡಿಸಿಪಲವ। ತೆರೆದೊಳರೆಗೊಲೆಗಳಂ ನೆರೆಕೊಂದುಕೊಲೆಯಾಡಿ
ದರ್ಕ್ಕಳರದೇಂಪೊಗಳ್ವೆನು॥೧೩॥ ಆಳ್ಕಾಲ್ವಿಡಿದುಭಟರಂಬಡಿದು
ಕುದುರೆಗಳಬಾಲಮಂಪಿಡಿದು ತೇಜಗಳನಪ್ಪಳಿಸಿಶುಂ। ಡಾಲಂಗಳಂ
ಪಿಡಿದುಕರಿಗಳಂಸೆದೆದು ತೇರಿಂದಂಮರೂಥಂಗಳ॥ ಸಾಲನಡಿಸುಡಿಮಾ
ಡಿಭಂಡಾರಬೊಕ್ಕಸದ। ಶಾಲೆಗಳನುರೆಸೂರೆಮಾಡಿಪಲತೆರದೊಳಾ।
ಕಾಳೆರಕ್ಕಸರಟ್ಟಿಮುಟ್ಟಿಬಲುಗೊಲೆಯುಕೊಲುತಿರ್ದರೇನೆಂದೆಂಬೆ
ನು॥೧೪॥ ಬೊಬ್ಬಾಟಮಾದುದೆಲ್ಲೆಲ್ಲಿಯುಂಸಕಲರುಂ। ಬೆಚ್ಚಳಿಸುತೆ
ಲ್ಲೆಲೆಹೋಹೋಕಡಿಯೆನುತ್ತಬಿಡೆ। ದಬ್ಬರಿಸಿನಿಗಂತವಿಂದೇಳ್ದು
ಕೈದುಮಂಮರೆದುತಲೆಗೆದರಿಕೂಡೆ॥ ತಬ್ಬಿಬ್ಬುಗೊಂಡುತಮ್ಮೊಳು
ತಾವೆಸಿಕ್ಕಿದಂ। ತಬ್ಬಿಹಡಿಹೊಯ್ಪೊಯ್ಯೆನುತ್ತೆ ಕೊಲ್ಲದಕೊಲೆಯು।
ಹಬ್ಬದೊಳುಮಣದುಮರುಳಾಡುದಮುರವ್ರಜಂಪೇಳಲೇನಚ್ಚರಿಯು
ನು॥೧೫॥ ಮದಗಜಂಗಳಿಗೆಪಲ್ಲಣಗಳಂಹಾಯ್ಕು ಬಲು। ಗುದುರೆಗಳ
ಚೆಂಗೆರಂಚಿಕೆಯುನೊಂದಿಸುಕೈಯು। ಮೊದಲೊಳಿಡುವಜ್ರಾಂಗಿಯುಂ
ಪೈಗೆತೊಡಿಸು ಸೂಡಾಯುಮಂಕಾಳೆಯಿಂದಂ॥ ಬೆದರಬರಿನೇಹ

ಯುಂಗಳನೊಡು ಹರಿಗೆಯುಂ । ಕದಳಿಸುವರೂಥಮುಂ ತೊಡೆಚಾಟು ಗೊಳ್ಳೆನುತೆ। ಕದನವಿಕ್ರಮರೆಲ್ಲರುಂ ಚೆದರಿಕಂಡಕಡೆಗೋಡಿದರದೇನೆಂಬೆನು ॥೧೬॥ ಸುರಭಟರ್ಮುರಿದು ದಿಕ್ಪಾಲಕರಮೇಲೆಯಾ। ಸುರಭಟದಿಕ್ಪಾಲರುಂ ವಿಧಿಯ ಮೇಲೆಯಾ। ಸುರಭಟದಿಕ್ಪಾಲವಿಧಿಗಳುಂ ಮಾಧವನಮೇಲೆ ಕಡುವೇಗದಿಂದಂ ॥ ಸುರಭಟದಿಕ್ಪಾಲವಿಧಿಮಾಧವಾದಿಗಳು। ಹರಗಣದಮೇಲೆ ಕಂಗೆಟ್ಟು ಬೀಳಲ್ಕಾಗ। ದುರುಳರಕ್ಕಸರನಿಬರುಂ ಸವರಿ ಗಾಸಿಸದೆ ಮುಂಬರಿದು ಬರುತಿರ್ದರು॥೧೭॥ ಬರಿಯುಮೈಗಳ ಬಿಟ್ಟ ಮುಂಡೆಗಳ ಬಾಳುಸು। ಟ್ಟೊರೆವಿಡಿದಕೈದುಗಳ ಜಗುಳಿತಬ್ಬಿಬ್ಬಾಗಿ। ಮುರಮಂಗರಕ್ಷೆಗಳ ವಾಹನಂಗಳ ರಕ್ಕಸರ್ಗಂಡಕಡೆಗಳಲ್ಲಿ ॥ ಇರಿದ ಘಾಯಂಗಳಿಂ ಸಜ್ಜೆಸಜ್ಜಗೆ ಬಿಡದೆ। ಕರೆವ ನೆತ್ತರ ಶಿರಾ ಸಲಹುಸಲಹೆಂದೆಂಬ। ಮೊರೆವ ಬಾಯ್ಗಳ ದಿವಿಜನಿಕರಮುಂ ಕಂಡುರುದ್ರಪ್ರಮಥಗಣಮೇಳ್ದುದು ॥೧೮॥ ವೀರಭದ್ರಂ ಕಾರ್ತಿಕೇಯನುರುತರ ಕಾಲ। ಭೈರವಂ ನಂದೀಶ್ವರಂ ಮಹಾಕಾಳನಂ। ಗೌರವದನಂ ಧೂಮಕಾಯಂ ವಿರೂಪಾಕ್ಷನದ್ರಿಭೇದನನೊಪ್ಪುವ ॥ ಸೂರೆಂದು ಪಾತಘಂಟಾಕರ್ಣ ಬಡಬಾಗ್ನಿ। ದಾರಸುರಘೋಷ ಚಂಡೇಶಮುಖ್ಯಸ್ವಪರಿ। ವಾರಸಹ ಮಾರ್ಭಟಸುತೇಳ್ದರೊಂದೇ ಭಾರಿ ರಾಮ ಕೇಳದ್ಭುತವನು ॥೧೯॥ ಭೂಗಗನಕಳತೆಯಿಟ್ಟಂತೇಳ್ದುದುರವಣಿಸಿ। ಸಾಗರಾಪೋಷಣನ ಸೈನ್ಯದಭಟಾಳಿಯಿಂ। ಬಾಗಿನೀಲಾದ್ರಿಗಳ್ನೆಗದಂತೆ ಪರ್ವತಾಭರಣನಬಲಂ ನೆರದುದು॥ ಮೇಗಮೇಗೊತ್ತುವಬ್ಧಿಯ ತೆರೆಗಳಂತೊದಗಿ। ತಾಗಕಾಲಾಪಹರಣಪಸೇನೆಹೆರೆಯುಗಿದ। ಭೋಗಿಕುಲದಂತೆ ಕಂಕಾಳಧರಸೈನಿಕಂ ಮೊರೆದೆದ್ದುದೇನೆಂಬೆನು ॥೨೦॥ ಮತ್ತೊಂದು ದೆಸೆಯೊಳಾಕಾಳಿಯುಮನಿರುತಿಗಳ। ಮೊತ್ತಮೇಳ್ದುದು ಬಳಿಕ್ಕೊಂದೆಸೆಯೊಳಾಮದೋ। ನ್ಮತ್ತಜಟ್ಟಗಭೀರಭೂತಭೇತಾಳಗಣಕುಲಮೊಡನೆಕವಿದುದಿರದೆ॥ ಇತ್ತ ಚಾಮುಂಡಿ ವಾರಾಹಿ ಭೈರವಿದುರ್ಗಿ। ಯುತ್ತ ಕೌಮಾರಿ ವೈಷ್ಣವಿಮುಖ್ಯಶಕ್ತಿಕುಲ। ಮೊತ್ತೆತ್ತಲನ್ನದೊತ್ತರಿಸಿಕವಿದಿತ್ತೆಲೇ ರಾಮ ಕೇಳದ್ಭುತವನು ॥೨೧॥ ಒಡನೆ ವೀರೇಶಷಣ್ಮುಖರ ನೇಮಂಗಳಂ। ಪಡೆದು ರುದ್ರಪ್ರಮಥಗಣಮಾದುರ್ಕೋಪದಿಂ। ಘುಡುಘುಡಿಸುತ್ತಲುಂ ವೇಡೆಯುಮನಿಕ್ಕಿಯೊಬ್ಬೊಬ್ಬರಂ ಮೂದಲಿಸುತ॥ ಪಿಡಿಬಾಳು ನುಂಗು ಕೊಯ್ಕತ್ತರಿಸು ನೂಂಕು ಕಡಿ। ಕಡಿಕೊಚ್ಚು ಮೋದು ತುಂಡಿಸಿಸೀಳು ನೆತ್ತರಂ। ಕುಡಿಕರುಳ್ವಗಿಯೆನಿಪ್ಪಬ್ಬರಂಗಳು ಪೊಣ್ಮೆ ಕೊಲತೊಡಗಿತಾಕ್ಷಣದೊಳು ॥೨೨॥ ಕೂಡಿ

ಹುರಿಗಟ್ಟಿತಾಹರಿಯುಚೇಂದ್ರಾದಿಸುರ । ರೀಡಿರಿದುದಖಿಳದೆಸೆಯುಂ
ವಾದ್ಯದಬ್ಬರವು। ದೀಡಿರಿದುದೆಲ್ಲಿಯುಂತೇರಾನೆಕುದುರೆಗಳ್ಕಾಲಾ
ಳ್ಬಲವೊದಗಿತು॥ ಓಡಿದವರೆಲ್ಲರುಂ ಕಲಿಯಾಗಿನಿಂದುಹೊ। ಯ್ದಾ
ಡುತ್ತಿರ್ದ್ದರ್ಕತ್ತಿವೆಳಗುತೊಡವೆಳಗುಗಳ್ಮಾಡೆಬೆಳನಂರಾಕ್ಷಸಾಳಿಕಂಗ
ಡೆಸಿದ್ಧರಾಮ ಕೇಳದ್ಭುತವನು॥೧೩॥ ವಾಡಬಾಗ್ನಿಯುಮೇಲೆಕಗ್ಗೊ
ಲೆಗೆಸಕಲಜಲ । ಮೋಡಿಕವಿವಂತೆಮಾರಿಯುಮನೆಗೆಕನ್ನವುಂ। ನಾ
ಡೆಸವೆವಂತೆಶಂಕರನಪಾಳೆಯದೊಳಗೆಕಗ್ಗೊಲೆಯೆನಿಮಗನುತ್ತ ॥
ಓಡುವರನಿರಿದಿರಿದುಕೆಡಪಿಮಾರಾಂತುಕೈ। ಮಾಡುವರನಲ್ಲಲ್ಲಿಸೆಣಸಿ
ಭಟರಿಂತುಪೊಯ್ದಾಡಿದರ್ಕೋಳಾಹಳಂಗಳಿಂಶಿವಗಣದಸೈನ್ಯದೊಳೆ
ಗೇನೆಂಬೆನು॥ ಕರವಾಳ್ಗಳಂಜಡಿದುನೊಂಕುವತಾರ್ಕಂಕುವ। ಕರ್ರಕೆ
ಥದುಪೆಗಗಳಂಮುತ್ತುವಕರ್ತ್ತುವ। ಧರ್ರಥರದಪೆಣಗಳಂಮೆಟ್ಟಿ
ವಕರ್ಟ್ಟುವರ್ತ್ತಲೆಗಳಂದೈತ್ಯಭಟರ॥ ಮೊರೆವವಾದ್ಯಧ್ವನಿಗೆಹುಗ್ಗಿ
ವೆರ್ಮ್ಮಗ್ಗುವ। ಕರ್ರದಿಂದೆಮುಂದಲೆಗತುಡುಕುವರ್ಮ್ಮಿಡುಕುವ। ರ್ಮ್ಮರಳಿ
ಪಜ್ಜೆಯನಿಡದೆಕಾದುವರ್ಮ್ಮೋದುವರ್ಶರ್ವಬಲದವೀರಭಟರು॥೧೪॥
ವೀರಭದ್ರನಬಲದಬಿರುಬುಷಣ್ಮುಖನಪರಿ। ವಾರದಟ್ಟಳಿಗಣೇಶನ
ಸೈನ್ಯದುರುಬೆಯಾ। ಭೈರವನಸೈನಿಕದಕೋಳಾಹಳಂದಂಡಧರನ
ಸೇನಾಕರ್ಕಶಂ॥ ವೀರಕಂಕಾಳಧರವಾಹಿನಿಯವಿಕ್ರಮಂ। ಸೂರೆಂದು
ಪಾತರಾಪಟೆಯಬಿರುಬಂತಡೆಯ । ದಾರುಕ್ಷಸಪ್ರತಾನಂತಾಯ್ಗ
ಮುಕ್ಕಳಾಗದೆಕೊಡೆಬೆಂಗೊಟ್ಟುದು॥೧೫॥ ಅರಿಯದಿರ್ಪಂಧಕಾಸುರ
ನೊಡನೆಹುಸಿಯನೆ। ಟ್ಟರಿಸಿಕಗ್ಗೊಲೆಗೆಬಾಚಿದಗಗನಮೂರ್ಧ್ನಿರ್ಯಯುಂ।
ತರಿದಕಟಗಗನಮೂರ್ಧ್ನಿರ್ಯಯು ಮಾಡಬೇಡವೇಶಿವಸುಭಟರೆಂದೆನು
ತ್ತ॥ ಮೊರೆಯಿಟ್ಟುಬಾಯ್ಬಿಟ್ಟುಕಂಗೆಟ್ಟುಮುರವಟ್ಟು। ಕರಕರನೆಕಂದಿ
ಧೃತಿಗುಂದಿಭೀತಿಯೊಳೊಂದ । ಸೆರೆತೆಗವರಂಕಂಡುಬೆಂಬತ್ತಿಸುತ್ತಿ
ಮುತ್ತಿರೀರ್ರ್ವರರೇನೆಂಬೆನು॥೧೬॥ ವೀರಭದ್ರಾದಿಗಣಸೈನಿಕದಭೂರ
ಣೆಯ। ನಾರಾಂತುನಿಂದಪರ್ಬ್ಬಳರುಮುರಿದೋಡಲಾ । ಗೇರೆಯುಮ
ನುಗಿದುಪಾಳೆಯಮನೊಳಪೊಕ್ಕುಸತಿಯರನಿರದೆಪಿಡಿದುಕೊಡೆ॥
ಸೇರಿಗೊಡಾರಂಗಳಂಕೊಯ್ವರಶ್ವಮುದ। ವಾರಣಂಗಳಸೈದೆಪಿಡಿದರ
ವನಿಪರಭಂ। ಡಾರಂಗಳಂಸ [illegible] ಾಡಿಗರಾಮ್ಡಿದರ್ಕ್ಕಳಕಳವನಾ [illegible]
ದೊಳು॥೧೭॥ ದೂರಿದುದ [illegible] ಕೋಪ
ದುದುಚಿತ್ತದೊಳುನಯ.
ಸುತ್ತೆಲ್ಲರಿಪುಭಟರೆನುತ

ಳಿಗಳಗರ್ಜನೆಗೆಪರಿಪರಿವ। ಸೂರೆಗರ್ಕ್ಯಗುಂದಲಂಧಾಸುರಂತೇರ್। ನೇ
ರಿಸಡೆದಂವಿಲಯಕಾಲದಂತಕನಂತೆಪೇಳಲೇನದ್ಭುತವನು ॥೧೯॥
ಪರಿವಸೂರೆಗರನಡೆಗೆಡಪಿದರ್ಮಡುಪಿದ। ರ್ಪರಿಪರಿಯಸೂರೆಯುಂಬಿಡಿ
ಸಿದರ್ಕಡಿಸಿದ। ರ್ಸರಳಬಿರುವಳಿಗಳೆಂಕವಿಸಿದರ್ಕವಿಸಿದರ್ಪ್ರತಭಟರ
ವಿಕ್ರಮವನು॥ ಬಿರುದನೆಹತರಮುಂದೆದೂರಿದರ್ಪೂರಿದ। ತುರಗಕೆ
ರಿನಿಚಯಮಂನೂಂಕಿದರ್ತಾಂಕಿದ। ಭರವಸದಸಮರದೊಳುರಾ
ಪುತರ್ಮಪುತರ್ಖಳಸಸೇನಾಂಬುಧಿಯೊಳು ೨೦॥ ತಗುಳಿರಿದುತರಿ
ದುಪಾಳೆಯದಿಂದೆಹಿಂದಕ್ಕೆ। ತೆಗಸಿದಪೂರಗಂಧಕಾಸುರಂಗಂನಾ
ಡೆ। ವಿಗಡವೀರೇಶಂಗೆಕಾಳೆಗಂತಳ್ತುದು ಕುಮಾರನೋಳ್ಗಳನಮೂ
ರ್ಧ್ನಿ॥ ತೆಗದನಂದಸಮಸಮರಂಗಮಂತಮತಮಗೆ। ತೆಗದ್ಟೆರಸುರ
ರಂವೃಷಭವೊದಆದಸಂ। ಯುಗಸಮರ್ಧಬಳಿಕಿತ್ತವೀರಾಂಧ
ಕಾಸುರರಾಹವಂಬಳಿದುದು॥೨೧॥ ಆರೀತನೆಮ್ಮೊಡನೆಕಾದಲನು
ಗೈದವಂವೀರಭದ್ರನೊಳೇಸುಳೇಸೆಂಧಕಾಸುರನ। ವೀರಮಂಮುಂ
ನ್ನಕೇಳ್ದರಿಯಲಾಕೊಳ್ಳಾಗೊಡೆನುತಚಾಪಮನೊದರಿಸಿ ॥ ಭಾ
ರಿಬಾಣಂಗಳಂತೆಗದೆಸಲ್ವನಶರಾ। ಸಾರಮುತ್ತೈತ್ತಲುಂಕತ್ತಲಿಸಲಾ
ಕ್ಷಣಂ। ಕಾರಮೇಘದಮರೆಯಸೂರಿಯನತೆರದೊಳಾವೀರನಂದಿಂ
ತೆಂದನು ॥೨೨॥ ಮುನ್ನಕೇಳ್ದರಿವುದೇಂಕ್ಯಯಕಂಕಣಕೇಕೆ। ಕಂ
ನಡಿಪರಾಕ್ರಮಂನಿನಗುಳ್ಳೊಡೀಕ್ಷಣದೊ। ಳೆನ್ನನಿನ್ನಂಬುಗಳಗು
ರುಲಘುಸ್ಥಿತಿಕಾಣಲಸುದೆನುತಚಾಪದಿಂದಂ॥ ಪನ್ನೆರಡುಬಾಣಮ
ನುರುಳ್ಕಲಹಗರುಡಭರ। ವಂಸೋಡಆತನೀತನಕಣೆಯೊಳಾದು
ದವ। ನಿನ್ನಿವಂಕಡಿಯೆನುತ್ತಿಂನೂರುಬಾಣಮಂಕೆನ್ನೆವರೆಗುಗಿದ್ಟೆ
ಸು॥೨೩॥ ವೀರನಾತನಶರಾಸಾರವಂಸಾಲ್ಗೊಂಟು। ಕೂರಂಬಿನಿಂಕ
ಡಿದುನಾರಯಂತೀಡುತವಿ। ಚಾರಿಸದೆನೀನೆನ್ನೊಳೋರಂತೆತೊಡ
ಕಿದೆಮಹಾರಣಾಂಕಣದೊಳೆನಲು॥ ವೀರಸ್ವದಳವರಿಯುಕ್ತತ್ರರಂ
ಬುಗಳ। ಸಾರವಂಕಡಿದೊಡೇಂಯಜ್ಞದೀಕ್ಷಿತನಾದ। ಹಾರುವರೆನಾ
ವುತೆಘೋರಾಸ್ತ್ರಮಂಪೂಡಿವೀರನೊಡನಿಂತೆಂದನು ॥೨೪॥ ಉ
ಗ್ರಾಸವಂಬೇಡನಿನ್ನಯಬಳಗೆ। ರುದ್ರನಂಕರಿಸಿಕೊಳ್ಳೆನ್ನಂಬಿ
ಗೆ ನಿಗ್ರಹಮಾದಪ್ಪುಗುನಿನ ... ಂಧಕಾಸುರಂಕೋಪದಿಂತೆ
...ಲು॥ ... ಮಿದಿಗ್ಜಾಲಮತಿ। ರೌದ್ರಾ
ಕ್ಷಿಸಿಘನಪ್ರತ್ಯಾಸ್ತ್ರದಿಂ
ಳನಂಬುಗಳನಿಕ್ಕುವಂ

ತುಳುಕ್ಕುವಂ| ಕೆರಳಿವೀರಂಕಣೆಯುಕವಿಸುವಂತವಿಸುವಂ| ಸರಳಿಂದಲ
ವನಿಯುಂಮುಚ್ಚುವಂಪೆಚ್ಚುವಂದಿವಿಜರಂದೆಸೆದೆಸೆಯೊಳು|| ಉರುಳೆ
ಗಡಿವಂವೀರನೊಲವಿನಿಂಗೆಲವಿನಿಂ| ತೆರಳೆಸವನೊಡನೆಸುವನುಬ್ಬಿ
ನಿಂಕೊಬ್ಬಿನಿಂ| ತರಹರಿಸದವನೆಟ್ಟುಕೂಗುವಂಬೀಗುವಂವೀರಭದ್ರಂ
ಕ್ಷಣದೊಳು||೩೬|| ಶರಕೆಶರವೆಥಟಂಗೆನುಥಟುಬೊಬ್ಬೆಗೆಬೊಬ್ಬೆ|
ಪರಮುಶೌರ್ಯಕೆಶೌರ್ಯವಾಯಾಸಕಾಯಾಸ| ವಿರದೆಘಾಯಕೆಘಾ
ಯುಮತಿಜವಕ್ಕತಿಜವಂಮೂದಲೆಗೆಮೂದಲೆಗಳು|| ಕರಚಮತ್ಕಾರ
ಕ್ಕೆಕರಚಮತ್ಕೃತಿವಿನಿಷ್ಠುರಕೆನಿಷ್ಠುರವಿುವಿದ್ವರ್ಗಿಸರಿಯಾಗಲುಂ| ದು
ರುಶಕ್ತಿಯಿಂವೀರಭದ್ರನಿಡೆಖಳನೆದೆಯನಾಕ್ಷಣಂಗರಿಯುಂಗಿದುದು||
ಘೋರ್ಗರೆದುಸುರಿವರುಣನಾರಿಯಿಂಖಳರಾಜ| ನೋರ್ಗುಡಿಸಿಕೆ
ಡೆದನಿಳೆಗೀತನಂನಾಂಕೊಲಲು| ಭರ್ಗನಂಬುಗಳಿಗಾಸಪರಾಧಿಯಾ
ದಪೆಂಸಾಕೆನುತ್ತುಳಿದಸುರರ|| ವರ್ಗಮುಂಚೆಂಬತ್ತೆಖಳಗಗನಮೂ
ರ್ಧ್ನಿರ್ಯಯುಂ| ಸ್ವರ್ಗಮುಂಕಾಣಿಸಿಗುಸಂತನಗೆವಾರಾಂತ| ವರ್ಗಳಂ
ಮುಡುಪೆನಂದ್ಯಾದಿಗಳ್ಸಂಹರಿಸತೊಡಗಿದರಸುರಭಟರನು||೩೮|| ಇ
ತ್ತಲಂಧಾಸುರನಪಾಳೆಯದೊಳೆಸುರರಂ| ತತ್ತರಂದರಿವುತ್ತವೀರಗು
ಹರ್ರೈತರ| ಲ್ಲತ್ತಲಾಖಳರಾಜನೆಚ್ಚತ್ತುವೀರಭದ್ರನನರಸುತತಿಭರ
ದೊಳು|| ಚಿತ್ತಜಾರಿಯಸಮ್ಮುಖಕ್ಕಾಗಿನಡೆತರ| ಲ್ಲತ್ತುವಾಹವವಿಾ
ಶನೊಡನೆಕೂರಂಬುಗಳ| ಕಿತ್ತುಕಿಪವರೆಗುಗಿದುಕರೆದನಾಕಾಶಯು
ಲ್ಲಿಂಬಾಣಮುಯುಮಾಗಲು||೩೯|| ಗಗನಮಂತುಂಬಿದಂಧಾಸುರನಬಾ
ಣಮುಂ| ನಗೆಮೊಗದೊಳೀಕ್ಷಿಸುತ್ತುಭವಂಪಿನಾಕಮಂ| ನೆಗಪಿಜೇವಡೆ
ದೊಂದುಬಾಣಮಂಪೂಡಿದಗದೆಸ[illegible]ಕ್ಷಣಂನೋಡಲು|| ಅಗಲದೊ
ಳ್ಪುಟಿದಂಬುಗಳ್ತುಂಡುತುಂಡಾಗಿ| ಯೊಗುತಿರ್ದವವನಿಯೊಳಗಂ
ಧಾಸುರಂಕಂಡು| ಮಗುಳೆಕೋಟಾನುಕೋಟಿಯುಮಾರ್ಗಣಂಗಳಂ
ತುಳ್ಕಿದಂಬೇಗದಿಂದಂ||೪೦|| ಹೇಮಾಚಲದಸರಿಸದೊಳುಬೀಳ್ವವರು
ಷಧಾ| ರಾಮುಹಾಗಣದಂತೆದೈತ್ಯನೆಸುಗೆಯಶರ| ಸ್ತೋಮಮಾಶನ
ಸುತ್ತಲುಂಬಳಸೆಕಂಡುಮತ್ತೊಂದುಬಾಣವನಭವನು|| ತಾಮಸಂ
ಗಯ್ಯದೆಸಲಸುರನಂಬಂಕಡಿದು| ಭೂಮಿಯೊಳಗುದುರಿಸಿದುದೊ
ಡನಂಧಕಾಸುರಂ| ಹೇಮಪುಂಖದಸರಳನಗಣತಮನೆಚ್ಚನಾವ್ಯೋ
ಮಕೇಶನಸರಿಸಕೆ||೪೧|| ಕಡುತವಕದಿಂಕಿಡಿಯನುಗುಳುತಂತಗು
ಳುತಂ| ಪೊಡವಿಗತಿಭೀತಿಯುಂಮಾಡುತಂಕಾಡುತಂ| ಬಿಡದುಧುಗ

ಷುವ್ರಜವನೊಂದಂಬಿನಿಂ ಮುಂಬಿನಿಂ। ತಡೆಗಡಿದು ಬಿಡಲವಂ ಕೋ
ಪದಿಂ ಚಾಪದಿಂ । ದೊಡಕವಿಸಿದವನಿಷುಸ್ತೋಮಮಂ ವ್ಯೋಮ
ಮಂ ತಾಳದಿರಲಖಿಳಜನರು ॥೪೨॥ ಪೇಳಲೇಂ ಭಾಂಡತತಿಗೊಂದು
ಗುದುಗೆಯ ಪೆಟ್ಟು। ಸಾಲದೇ ಖಳನೆಟ್ಟಮಾರ್ಗಣವ್ರಾತಮಂ। ಶೂಲಪಾ
ಣಿಯ ಬಾಣವೊಂದೆ ಕಡಿದವನ ಕರಕಾರ್ಮುಕವನುಂ ಛಿದ್ರಿಸಿ॥ ಸಾಲಸೀ
ಸಕಜೋಡು ಬತ್ತಳಿಕೆ ಕೈಪೊಡೆಯ। ಮೇಳವಂ ತರಿದಂಧಕಾಸುರನ
ಗರ್ವಗಿರಿ। ಜಾಲಮಂ ಸವರಿದುದು ಶಿವನ ಬಾಣದ ಚಮತ್ಕಾರಮಂ ಪೊಗ
ಳಲಳವೆ॥೪೩॥ ಚಂಡವಿಕ್ರಮನತುಳಕೋಪದಿಂದಂ ಹಲಗೆ। ಖಂಡಯಂ
ಗಳನಾಂತು ಪೊಯ್ವೆನೆಂದುಬ್ಬಿನಿಂ। ಖಂಡಪರಶುವನಿರದೆ ಮೇಲ್ವಾ
ಯಲಭವಂ ತ್ರಿಶೂಲದಿಂದಿರಿದು ಬಳಿಕ॥ ಅಂಡಲೆವುತಾಕಾಶಕೆತ್ತಲಾ
ಖಳನ ಮೈ। ಯುಂಡ ರಕ್ತಂ ನಿಮಿಷಮಾತ್ರದೊಳು ಭೂತಳಕೆ। ಹಿಂಡಿ
ಹಿಳಿದಂತೆ ಕರೆಯಲ್ವಿಗತಮದನಾಗಿ ಕೊಂಡಾಡಿದಂ ಶಿವನನು॥೪೪॥ ಜ
ಯ ಸರ್ವಾಧಾರ ಜಯ ಕಾಲಸಂಹಾರ। ಜಯ ದಿವಿಜನುತ ಚರಣ ಜ
ಯ ಭುಜಂಗಾಭರಣ। ಜಯ ಹುತಾಶನನೇತ್ರ ಜಯ ಮನೋಹರಗಾ
ತ್ರ ಜಯ ಭೀಮ ವಿಧೃತ ಸೋಮ॥ ಜಯ ದನುಜಲಯಕಾಲ ಜಯ ಸ
ಕಲಜನಪಾಲ। ಜಯ ವಿಜಿತಸಮವರ್ತಿ ಜಯ ಚಾರುತರಕೀರ್ತಿ। ಜಯ
ದಕ್ಷಮಖಶಿಕ್ಷ ಜಯ ಜಯ ವಿರೂಪಾಕ್ಷ ಸಲಹೆಂದನಸುರೇಂದ್ರನು॥೪೫॥
ಇಂತೆಂದು ಕೊಂಡಾಡಿದಂಧಾಸುರಂಗೊಲ್ದು। ಕಂತುಮರ್ದನ ಮೆಚ್ಚಿದೆಂ
ಬೇಡು ಬೇಡೆನಲು। ಸಂತೋಷಸಾಗರದೊಳದ್ದೆನ್ನವಕ್ಷದೊಳು ನಾಟ್ಯ
ಮಂ ನಟಿಸಿ ಬಳಿಕ॥ ಮುಂತೆ ಚಿರಮಾದ ಗಣಪದವಿಯಂ ಪಾಲಿಸೆನೆ। ಅಂ
ತೆಗೈದಪೆನೆಂದು ತಾಂಡವದ ಚಿಹ್ನವಂ। ತಾಂ ತಳೆಯಲುದ್ಯೋಗಿಸಿದ
ನದೇಂ ಭಕ್ತರಾಧೀನನೋ ಸರ್ವೇಶನು॥೪೬॥ ಕುಂಜರವ್ಯಾಘ್ರಚರ್ಮಂ
ಗಳಂ ದೇಸಿಯಂ। ಮುಂಜೆರಗು ಮಿಗಲುಟ್ಟು ಪೊಳೆವ ಮುರಿಮಾವಿನಿಂ। ಕೆಂ
ಜೆಡೆಗಳಿಂ ಬಿಗಿದು ವರವಿಭೂತಿಯನೆಸವ ಸರ್ವಾಂಗದೊಳ್ಧೂಳಿಸಿ॥ ರಂ
ಜಿಸುವ ಶರಪಿನಾಕಮನುಳಿದು ಶೂಲದಿಂ। ದಂಡವದೊಳಸುರನಂ ನೆಲ
ಕಿಳುಪಿ ಶಂಭು ಪು। ಷ್ಪಾಂಜುಳಿಯ ಗಮಕದಿಂದವನ ವಕ್ಷೋರಂಗಮಂ
ಪೊಗಲ್ಕನುಗೈದನು॥೪೭॥ ನಂದಿ ಮದ್ದಳೆಯನಬ್ಜಾಸನಂ ತಾಳಮಂ। ಕಂ
ದರ್ಪಪಿತನೆಸವ ವಾಸವಂ ಹರುಷದಿಂ। ದಿಂದಿರನುಪಾಂಗಮಂ ನಾರ
ದಂ ವೀಣೆಯಂ ತುಂಬುರರು ದಂಡಿಗೆಯನು। ಇಂದುಮೌಳಿಯ ಸುತ್ತ
ಲುಂ ಪಿಡಿದು ತತ್ಕ್ರಿಯೆಗ। ಳಿಂದ ಬಾಜಿಸಿದರಂಬುಜಭವಾಂಡಂ ನೋ
ಡೆ। ಎಂದು ಶಬ್ದಬ್ರಹ್ಮದಿಂ ಪೂರ್ಣಮಾದುದೆಂಬಂದದಾಯೆತ್ತ ವೇಳ್ವೆ

ಬೆರಡಾಯ್ತು । ಮಿಸುಪಚಿತ್ತೀಶಕ್ತಿಭಕ್ತಿವೆಂಬೆರಡಾಯ್ತು । ಪೆಸ
ರಿಪಾನಂದವೆಸವುಪರ್ಣಂ ತತ್ಪ್ರಸಾದಂಗಳೆಂಬೆರಡಾದವು ॥ ಜಸ
ನಾದಸಚ್ಚಿದಾನಂದಲಕ್ಷಣವೆರಾ। ಜಿಸುವತತ್ವತ್ರಯಂತಾನೆಷಟ್ಸ್ಥ
ಲವೆಂಬ । ಪೆಸರಾಂತುದೆಂದಾಗಚನ್ನಬಸವಂಸಿದ್ಧರಾಮಂಗೆ ನಿರವಿ
ಸಿದನು ॥ ೧೫ ॥ ಇಂತುವರಶಿವನೆಷಡ್ವಿಧಲಿಂಗವಾಗಲಾ । ನಂತರದಪ
ರಮಾತ್ಮನೆಷಡ್ವಿಧಾಂಗದಿಂ । ದಂತಳೆದುಸರ್ವಾಂಗಲಿಂಗಿಯಾಗಿರು
ತೆಸರ್ವೇಂದ್ರಿಯಪದಾರ್ಥಂಗಳ ॥ ತಾಂತಡೆಯದಾಗಲರ್ಪಿಸಿತತ್ಪ್ರ
ಸಾದವಂ। ಸಂತೋಷದಿಂದೆಸೇವಿಸಿಸುಖದೊಳಿರುತಲಾ । ಮುಂ
ತೆಕಮನಿವೃತ್ತಿಯೊಳೈಕ್ಯವಾದುದಂಪೇಳ್ವೆ ನೊಲಿದಾಲಿಸಿಂ
ನು ॥ ೧೬ ॥ ಪರಶಿವನೆಲಿಂಗಮಾಪರಮಾತ್ಮನೇಯಂಗ। ವೆರಡರೊಳು
ತೆರಹಿಲ್ಲದಿಪ್ಪುದೇಸಂಯೋಗ। ದಿರದೆಸಂಯೋಗವೆಸದ್ಭಕ್ತಿಯೆನಿ
ಸಿತದರಿಂದಾಯ್ತುಭಕ್ತಸ್ಥಲಂ ॥ ವರಭಕ್ತನಾಚಾರಲಿಂಗಸಂಯೋಗ
ದಿಂ। ದಿರುತಿರ್ಪಸದ್ಭಕ್ತಿಯಿಂದಿರ್ಪನಿಷ್ಠೆಯೆ । ಪರಮನಿಷ್ಠಾಭಕ್ತಿ
ಯೆನಿಸಿತೆಲೆಸಿದ್ಧರಾಮೇಶನೀಂಕೇಳೆಂದನು । ೧೭ ॥ ಎಸವನಿಷ್ಠಾಭ
ಕ್ತಿಯಿಂದಲಾತ್ಮಾಂಗಿರಾ । ಜಿಸುವಮಾಹೇಶ್ವರಸ್ಥಲವಾಯ್ತುದಾತ
ನೆ। ಪಸಿರಿಸುವಗುರುಲಿಂಗಸಂಗದಿಂದಿರ್ಪನಿಷ್ಠಾಭಕ್ತಿಯವಧಾನವೆ॥
ಎಸಕದಿಂದವಧಾನಭಕ್ತಿಯೆನಿಸಿತ್ತರದ। ದೆಸೆಯಿಂಪ್ರಸಾದಿಯಸ್ಥ
ಲವಾದುದಾತನಾ । ಜಸವೆತ್ತಶಿವಲಿಂಗಯೋಗದಿಂದಿರುವಾವಧಾನ
ದವುಪಾನುಭವನೆ ॥ ೧೮ ॥ ತಿಳಿಯಲನುಭವಭಕ್ತಿಯೆನಿಸಿತಾಭಕ್ತಿ
ಯಿಂ। ದಳವಟ್ಟಪ್ರಾಣಲಿಂಗಿಸ್ಥಲವದಾಯ್ತಾತ ॥ ನೊಲಿದುಚರಲಿಂಗ
ಸಂಯೋಗದಿಂದಿರ್ಪಪರಮಾನುಭವದಾನಂದವೆ ॥ ಪೊಳೆವುತಿಪ್ಪಾ
ನಂದಭಕ್ತಿಯೆನಿಸಿತ್ತದರೊ । ಳೊಲಿದುಶರಣಸ್ಥಲವದಾಯ್ತಾತತಂ
ನತಾಂ, ಬೆಳಗುವಪ್ರಸಾದಲಿಂಗದಯೋಗದಿಂದಿಹಸದಾನಂದಸಾಮ
ರಸವೆ॥ ೧೯ ॥ ಪರಮಸಮರಸಭಕ್ತಿಯೆನಿಸಿತಾಭಕ್ತಿಯಿಂ। ದಿರದ
ಲೈಕ್ಯಸ್ಥಲವದಾಯ್ತುಬಳಿಕೈಕ್ಯನಾ । ವರಮಹಾಲಿಂಗಸಂಯೋಗ
ದಿಂದೈಕ್ಯನಾಗಲ್ಕೆ ಪರಮೈಕ್ಯನಿಂದಂ॥ ಪದವಿಲ್ಲವಾಗಿಸಮರಸಭಕ್ತಿ
ಯಾತನ। ಲ್ಲಿರುತೆಸಮರಸವಾಗಿನಿಶ್ಶಬ್ದವಾಯ್ತೆಂದು ॥ ಕರುಣದಿಂ
ಚನ್ನಬಸವೇಶನಾಸಿದರಾಮೇಶಂಗೆನಿರವಿಸಿದನು ॥ ೨೦ ॥ ಸಸಿಮಂ
ಡಲಂಜೊನ್ನವಾಗಸಂವಾಯುವಾ। ಕುಸುಮಮಾಸುರಭಿಕರಕಾಂ
ಭಸಂವಾಗರ್ಥ । ವೆಸವದೀಪಂಬೆಳಗುರತ್ನವಾಕಾಂತಿರಸರುಚಿಗ
ಳೆಂದೆಂಬೆರಡರ ॥ ಬೆಸುಗೆಯಿಂದಾವಿಭಾಗಂಗಳಂ ತಂತೆರಾ। ಜಿಸುತೆ

ತತ್ಲಿಂಗದಂಗದಸಂಯೋಗವಂ। ತೆಸದುಭಯುವೆಳಿದೇಕವಾದುದೈಕ್ಯ
ವಿದೀಗವೆಲೆರಾಮುಕೇಳೆಂದನು ॥೨೧॥ ಪಸರಿಸುವಲಿಂಗದಂಗದಸಂಗ
ವೇಯೋಗ। ವೆಸವಸಂಯೋಗವೆನಿವೃತ್ತಿಯುನಿವೃತ್ತಿಯೋ। ಮಿಸು
ಗುವದ್ವೈತವದ್ವೈತವೆಸಲೈಕ್ಯವಂತ್ಯೈಕ್ಯವೇಸಾಯುಜ್ಯವು ॥ ಮಿ
ಸುಪಸಾಯುಜ್ಯವೇವಿಶ್ರಾಂತಿಸೆನಿಪುದಾ। ಪಸರಿಸುವವಿಶ್ರಾಂತಿಯೋ
ಪರಮಪದವಿಯಾ। ಜಸವೆತ್ತಪರಮಪದದಿಂಬೇರೆಮುಕ್ತಿಯಿಲ್ಲೆಲೆ
ಸಿದ್ಧರಾಮಕೇಳು ॥೨೨॥ ಇಂತುಭಕ್ತಾದಿಯೈಕ್ಯಾಂತವಾದಾತ್ಮ
ನೇ। ಮುಂತೆಯಾಚಾರಲಿಂಗಾದಿಸುಮಹಾಲಿಂಗ। ಮಂತಷಡ್ವಿಧಲಿಂ
ಗಮಂಷಡ್ವಿಧಾಂಗದಿಂತಳೆದೈಕ್ಯನಿಜಪದವಿಯು ॥ ಅಂತುಷಟ್ಸ್ಥಲ
ಬೊಮ್ಮಗಾಚರಣೆಮಾರ್ಗವಿದು । ನೀಂತಿಳಿವುದೆಂದಾಗಚನ್ನಬಸ
ವೇಶ್ವರಂ । ಸಂತಸದಿಸಿದ್ಧರಾಮೇಶಂಗನಿರವಿಸಿದನಖಿಳಶರಣತತಿ
ಳಿವ್ವೊಲು ॥೨೩॥ ಇಂತೆಸವಚನ್ನಬಸವೇಶ್ವರಪುರಾಣಮಂ । ಸಂತ
ಸದಿಬರೆದವರ್ಗೋದಿದರ್ಗರ್ಥವಂ। ಸ್ವಾಂತಮಂಬಿಡದೆಪೇಳ್ದರ್ಗೆ ಪರಿಸಿ
ದವರ್ಗೆ ಭಕ್ತಿಯಿಂಕೇಳ್ದವರ್ಗೆ॥ ಸಂತತಂಸಕಲಸುಖಮಂಸಕಲಭೋಗ
ಮಂ। ಸಂತಸಾಭಾಗ್ಯಮಂಕೊಟ್ಟುರಕ್ಷಿಸುವನಾ। ಕಂತುಹರನಪರಾ
ವತಾರನೆನಿಸುವಚನ್ನಬಸವೇಶನೊಲ್ಪಿಂದಂ ॥೨೪॥

ಐದನೆಯ ಕಾಂಡದ ೮ನೇ ಸಂಧಿ ಮುಗಿದುದು
ಅಂತು ಸಂಧಿ ೬೨ಕ್ಕಂ ಪದ ೨೪೪೦ಕ್ಕಂ ಮಂಗಳ.

## ೯ನೇ ಸಂಧಿ

ಸೂಚನೆ.। ಎಸವಷಟ್ಸ್ಥಲಮಾರ್ಗಮಂತಿಳಿದೆನೆನ್ನಿರಾ। ಜಿ
ಸುವಕಾಲಜ್ಞಾನಮಂತ್ರಿಳಿಯುಪೇಳ್ದುದ। ಕ್ಷಿಸುವುದೆನೆಸಿದ್ಧರಾ
ಮೇಶಂಗೆಗುರುಚನ್ನಬಸವೇಶನಿರವಿಸಿದನು॥

ಪದ॥ ಪುಂಡರೀಕಾಕ್ಷಸುಖಮಾರಗಜಭಸಿತಾಂಗ। ಪುಂಡರೀಕಾ
ಕ್ಷವತ್ರಿನೇತ್ರದಕನೆವಿಮಲ। ಪುಂಡರೀಕಾಪವೆಂದುವಹ್ನಿತ್ರಿಲೋಚ
ನನೆಪುಂಡರೀಕಜವಂದಿತ॥ ಪುಂಡರೀಕಾಪ್ತಪುತ್ರಾರಣ್ಯಘನದಾವ।
ಪುಂಡರೀಕಾಂಬಕಸುನಯನಪೂಜಿತಪಾದ। ಪುಂಡರೀಕಾತ್ಮಜಮ
ಖಧ್ವಂಸಿಸಂಹಾರವಿರೂಪಾಕ್ಷಸಲಹೆಮ್ಮನು ॥೧॥ ಎಲೆಮಹಾಗುರುವೆ
ನೀಂಕರುಣದಿಂಪೇಳ್ದಷಟ್ಸ್ಥಲಮನರಿತಿಳಿದೆನ್ನಭವಭವಾಂತರ
ವಾದಿ। ಗಳೆದುಸದ್ಯೋನ್ಮುಕ್ತನಾದೆನೆಂದಾಚನ್ನಬಸವನಂನುತಿಸು
ತಿರಲು ॥ ನಲವಿನಿಂಪ್ರಭುಸಿದ್ಧರಾಮನೀಂಬಂದುದಕೆ। ಫಲವಾಯ್ತು
ನಾವಿನ್ನುಪೋಗಿಬಂದಪೆವೆನಲು। ಮಲಹರನೆನಿಮ್ಮಿಂದಲೆಂತಪ್ಪಸ

ದ್ಗುರುವಕಂಡುಕೃತಕೃತ್ಯನಾದೆಂ ||೨|| ಎಂದಾಗಸಿದ್ಧರಾಮೇಶನೆ
ಲ್ಲಮಗೆರಗಿ | ನಿಂದುಕೊಂಡಾಡುತಿರೆಚನ್ನಬಸವೇಶನಾ| ನಂದದಿಂ
ದಲ್ಲಮಪ್ರಭುಸಿದ್ಧರಾಮೇಶನಾಗ್ರಜಿಳೆಗಣಕುಲವನು || ಮಂದಿರ
ಕೊಕ್ಕಡಗೊಂಡುಪೋಗಿಮೃಷ್ಟಾನ್ನದಿಂ| ಬಂದವರನೆಲ್ಲರಂತೃಪ್ತಿವಡಿ
ಸಲುಕರುಣ| ದಿಂದಾಗಲಲ್ಲಮಂ ಬಸವಮೊದಲಾದಗಣಸಂಕುಲಕ್ಕಿಂ
ತೆಂದನು||೩|| ಚನ್ನಬಸವಂಪೇಳ್ದಷಟ್ಸ್ಥಲಸುಮಾರ್ಗಮಂ|ಚನ್ನಾ
ಗಿತಿಳಿದುಕೊಳುತಿರೆಮಂಳಿಬಂದಾಗ| ಭಿನ್ನವಿಲ್ಲದತೆರದೆಸಂಪಾದ
ನಂಗೈದುನೋಡಿನಿಮಗಾಗೆಬಳಿಕ|| ಉನ್ನತಸುಮುಕ್ತಿಯೊಳಗಿಂಬಿ
ಟ್ಟುಪೋದಪೆಂ| ಸಂನಿಯೆಂದಾಗನಂಬುಗೆ ಇತ್ತುಬಸವನುಂ| ಚೆಂನಬ
ಸವಂಸಿದ್ಧರಾಮಮೊದಲಾದರಂನಿಲಿಸಿತಾಂಬೀಳ್ಕೊಂಡನು||೪|| ಸಿದ್ಧ
ರಾಮೇಶನಾಚನ್ನಬಸವಂಗೆರಗಿ| ಬುದ್ಧಿಯೆನಗಿನ್ನಾವುದೆನೆಕೇಳ್ದು
ನೀಂಸುಪ್ರ | ಸಿದ್ಧವೆನಿಸುವಸೊನ್ನಲಾಪುರದೆನಿಜಸಮಾಧಿಯೊಳಿ
ಪ್ಪುದೆನಲಾತನು| ಬದ್ಧಾಂಜಲಿಸ್ಪೃಷ್ಟವಮಕುಟತಟನಾಗು| ತುದ್ಧ
ರಿಸಬೇಕಿನ್ನುಮುಂದಣಾಗಂತರದ| ಸುಪ್ರಿಯಂಪೇಳ್ವುದೆನಗೀಗಲೆ
ನೆಚನ್ನಬಸವೇಶನೊಲಿದಿಂತೆಂದನು||೫|| ಆಸ್ಯೆರಾಮಕಾಲಜ್ಞಾನ
ಮಂಮಹಾ| ಲೀಲೆಯಿಂದಲ್ಲಮಪ್ರಭುವೀಗತಾಂಪೋದ| ಮೇಲಖಿಳ
ದೇಶಮಂಚರಿಸುತಾಶಿವಭಕ್ತರಿಷ್ಟಮಂಕರುಣದಿಂದೆ|| ಪಾಲಿಸುತ್ತಲ್ಲಿ
ರ್ಪುಗಿರಿಗುಹಾನದನದೀ| ಜಾಲಮಂತನ್ನಪಾದಸ್ಪರ್ಶದೊಳಾಗ| ಮೆ
ಲಾದಪುಣ್ಯತೀರ್ಥಂಗಳಂಮಾಡುತಂತಿಗುಳಾನ್ಯಕೃತರುವನು||೬|| ಇ
ರದಾಗಕಂಚಿಕಾಳಹಸ್ತಿಶ್ರೋನ್ನಾಂಬಲಮು| ದರುಣಾಚಲಂಕುಂಭಕೋ
ಣೆರಾಮೇಶಮು| ತ್ರಿರದಲ್ಲಿಗೋಕರ್ಣಸೌರಾಷ್ಟ್ರಕಾಸಿಕೇದಾರಾದಿ
ತೀರ್ಥಂಗಳ|| ಕರುಣದಿಂನೋಡುತಾಹಿಮಗಿರಿಯನಂಟಿತಂ| ತಿರು
ಗಿಬರುವಂಸಮಾಲಕ್ಷಪರ್ವತಗಲ್ಲಿ | ಪರಮಮುನಿಗಳನೋಡಿತತ್ವ
ಮಂಪೇಳ್ದುಮುಕ್ತಿಯನೊಲಿದುಕೊಟ್ಟುಬಳಿಕ||೭|| ಆಗಿರಿಗುಹಾಂ
ತರದೆಸಟಯೋಗಲಂಬಿಕಾ| ಯೋಗಮೊದಲಾದವಕ್ಕಧಿಕವೆನಿಸುವ
ರಾಜ| ಯೋಗದಿಂತನ್ನಿಜಮಂತಾನೆಜಾನಿಸುತ್ತೀರುರುವರುಷಮಿ
ರ್ದು೮|| ಆಗಳೀಬಸವಂಣನಂದುಮರೆಗಂಬಿಡದೆ| ನಾಗಿಸುವಶೂನ್ಯಪೀ
ಠವನರಿದುತಾಂಮನೋ| ವೇಗದಿಂದಲ್ಲಿಗೈತರುವನೆಲೆಸಿದ್ಧರಾಮೇ
ಶನೀಂಕೇಳೆಂದನು||೯|| ಅಲ್ಲಮಪ್ರಭುವಲ್ಲಿಗೈತಪ್ಪುದಂತಿಳಿದು | ಮೆ
ಲ್ಲನೇಬಸವಣ್ಣಗರುಪಿಬಳಿಕೀಶರಣ| ರೆಲ್ಲರುಂಸಹಿತದಿರೆಗ್ಗೊಂಡುಕರ
ತರಲಾಶೂನ್ಯಪೀಠವನೇರುವೆಂ|| ಅಲ್ಲದೆ ಚರಪತಿಗಳಕಂಡುಕೆ

ಡೆ ಮುಳಿದು। ನಿಲ್ಲದೇ ಪೋಗಲೀ ಬಸವರಾಜಂ ಮಹಾ। ತೆಲ್ಲಣಂಗೊಂ
ಡು ಪಬುರಾಯಂಗೆ ಬಿನ್ನವಿಪನೆಲೆ ರಾಮ ಕೇಳೆಂದನು॥೯॥ ನೋಡೀ
ಗ ಗುರುವೆ ಜಂಗಮದೇವರಿರದೆ ಪೂ। ತಾಡದೇ ಮುಳಿದು ಸಲಿಸದೆ ಪೋ
ದರಿಗಳೇನ। ಮಾಡುವೆಂ ತಾನೆನುತ್ತೀ ಬಸವನಲ್ಲಮಂ ಗುಸುರಲತ್ತ
ಕರುಣದಿಂದಂ॥ ಕೋಡುಮುಮನದಿ ಘನಚರಲಿಂಗಕೀಗ ನೀಂ ಮಾಡಿ
ಸಿದ ಪರಿಕರವನೆಲ್ಲ ನಂತಪ ಸೆಮಗೆ। ನೀಡಿಸಿದೊಡಾರೋಗಿಸುವೆವೆಂ
ದು ನುಡಿಯಲದ ಕೇಳುತತಿಶಕ್ತಿಯಿಂದಂ॥೧೦॥ ಲಕ್ಕದಿಂ ಮೇಲೆ ತೊಂ
ಭತ್ತಾರು ಸಾವಿರದ ಲಕ್ಕದಿಂ ಮಿಗಿಲೆನಿಪ ಚರಲಿಂಗಕೊಲವಿನಿಂ। ಚೊ
ಕ್ಕಟದಿ ಮಾಡಿಸಿದ ಪರಿಪರಿಯ ಪರಿಕರಂಗಳನಿರದೆ ತರಿಸಿಕೊಡೆ॥ ಉ
ಕ್ಕವತಿ ಹರುಷದಿಂ ನೀಡಿಸುವನನಿತುಮಂ ಮುಕ್ಕಣ್ಣನಪರಾವತಾ
ರನಲ್ಲಮನಾಗ। ಲೆಕ್ಕಿಸದೆ ಸ. ಸುವಂ ಗಗನವೇ ಬಾಯ್ದೆರದೊಳಿರಾ
ಮ ಕೇಳೆಂದನು॥೧೧॥ ಅವಿರಳಾನಂದಮಯ ಗುರು ಚನ್ನಬಸವನೀಂ।
ವಿವರಿಸುವಡೆನಗ ಘನಚರಲಿಂಗಕೊಲವಿನಿಂ। ಸವೆದ ಬೋನವನೀತ
ನೋರ್ವನಲ್ಲಮ ನೀವನುಂಬುದಕ್ಕರಿಯೆಂದನೆ॥ ಶಿವನಾಜ್ಞೆಯಿಂದ
ಖಿಳಗಣಕುಲ [illegible] ತಣಿವ। ಶಿವಪೇಳ್ದು ಮಾಡಿದನಿತನ್ನುಮಂತಾ
ನವರ। ನೆವದಿಂದ ಲಿಂಗ ಷ್ಟಗಣನಾಥನೋರ್ವನಾರೋಗಿಸನೆ ಕೇಳೆಂ
ದನು॥೧೨॥ ಆಗಣೇಶ್ವರನಿಂದಸ ವೃತಗಣಕುಲ। ಕ್ಕಾಗದೇ ತೃಪ್ತಿ
ಕೇಳೈ ಸಿದ್ಧರಾಮನೀ। ನೀಗಳಾಸಿನಾರ್ಯನೆನಿಪ ಗಣನಾಥನಲ್ಲ
ಮನೆನಿಸಿ ಚರಿಸಿಬಂದು॥ ರಾಗದಿಂದನಿತನೊಪ್ಪನೆಸತಸೆ ಮುಳಿದ
ದಸ್ಸ। ಪೋಗಿರ್ದರೆಲ್ಲರ್ ತೃಪ್ತಿಯಹುದೆನೆಪದನು। ಶ್ರೀಗುರುವೆ
ಯೋಗ್ಯನಿಂದನಿಬರ್ ತೃಪ್ತಿಯಂತಪ್ಪುದೆನೆಂತೆಂದನು॥೧೩॥ ಕು
ರುಪತಿಯು ನೇಮದಿಂದೂರ್ವಾಸನಂದುಸಂ। ನೆರಡುಸಾವಿರಮಂದಿ
ಋಷಿಗಳಂ ಕೂಟಕೊಂ। ಡಿರದೈದಿ ಧರ್ಮಜನಗಾಸಮಂ ಕೇಳಲಾ
ಕೃಷ್ಣನಕ್ಷಯಪಾತ್ರೆಯು॥ ತರಿತೊಳೆವ ಶಾಕಮಂ ಕುಡಿಯೆ ಹನ್ನೆ
ರತುಸಾವಿರಮಂದಿ ಋಷಿಗಳ್ಗೆ ತೃಪ್ತಿಯಾಗದೆ ಪಿಂತೆ। ಮರುಳೆ ಶಿವ
ಚಿತ್ಪ್ರಸಾದದೆ ತೃಪ್ತಿಯಪ್ಪುದಂ ಚೋದ್ಯವೇ ಪೇಳೆಂದನು॥೧೪॥ ಅ
ದು ನಿಮಿತ್ತದಿನಲ್ಲಮನಮುಖದನನಿತುಚರ। ರುದರ ತುಂಬವುದಾ
ಗ ಬಸವನವರೆಲ್ಲರಂ। ಸದನಕ್ಕೆ ಮರಳಿ ಕರತಂದವರು ಬೇಡಿದಿಷ್ಟಂಗ
ಳಂಕೊಟ್ಟು ಕಳುಪಿ॥ ಮುದದಿ ಗಣಕುಲಸಹಿತೆ ಬಸವನಲ್ಲಮಗೆರಗಿ। ಸ
ದಮಲಜ್ಞಾನಿಗತಿಯೆಮಗಾವುದೆನೆ ನಿಮ್ಮ। ಹೃದಯದನುಭಾವದೈ
ಕ್ಯಸ್ಥಳವಪೇಳಿಮೆಂದಲ್ಲಮಂ ನಿರವಿಸುವನು॥೧೫॥ ಎಂದು ನಿರವಿಸ

ಲಾಗ ಬಸವಾದಿ ಸಕಲಗಣ । ಬೃಂದಮಿರದೊಡನೆ ತಮ್ಮತ್ರ್ಯೈಕ್ಯಸ್ಥಳೆಗ
ಳು । ಸಂದಿಲ್ಲದಂತೆ ಬಿನ್ನವಿಸಲಲ್ಲಮನಾಗವೆಚ್ಚಿ ನಿಮುಕ್ತ್ಯೈಕ್ಯಪದವಿ॥
ಛಂದದಿಂದಳವಟ್ಟುದೆನುತೆ ನಿರವಯಮಾಗು| ವಂದವಂಕರುಣದಿಂತಿ
ಳುಪಿ ಬಳಿಕೆಮ್ಮನಾ । ನಂದದಿಂಬೀಳ್ಕೊಂಡು ಸಿರಿಶೈಲಕೈದು ಪಂಕೇ
ಳೆ ದುನಿರವಿಸಿದನು ॥೧೬॥ ಆಗಿರಿಯ ಮೇಲೆಗೋರಕ್ಷನೊದಬಾದ
ಬಿಳ| ಯೋಗಿಗಳೆಮನಿಷ್ಟವಂ ಕೊಟ್ಟು ಮಹದೇವಿ । ಗಾಗನಿರ್ವಾ
ಣಪದವಿಯನರುಪಬಾಕೆ ಕದಳಿಯ ಲಿಸಿರವಯಮಪ್ಪಳು ॥ ರಾಗ
ದಿಂದಲ್ಲಮಂ ಕದಳಿಯಂ ಪೊಕ್ಕು ಶಿವ । ಯೋಗದಿಂ ನಿರವಯವನೈದು
ವನದಂತಿಳಿದು| ಬೇಗದಿಂದೀಬಸವ ಪಿಳೆಗಣಸಂಕುಲಕ್ಕೆ ರಗಿಬಿನ್ನ
ಹವಮಾಡಿ॥೧೭॥ ಆಶಿಸ್ತೈ ಸಿದ್ಧರಾಮೇಶನೀಂ ಬಳಿಕಲಾ । ಶಾಲಿವಾ
ಹನಶಕದೊಳೇಳೆಳುನೂರಿಂಗಮುಂ । ಗೇಳನೆಯ ರಕ್ತಾಕ್ಷಿಯೆಂಬ
ವತ್ಸರದ ಪಾಲ್ಗುಣಶುದ್ಧದೇಕಾದಶಿ ॥ ಮೇಲಾದತಿಥಿಯುಮಂಗಳ
ವಾರದುದಯದಿಂ । ಮೇಲಣಸ್ವತ್ತ್ರದುಗಣಗೋಳ್ಬಸವ ನತಿ|
ಲೀಲೆಯಿಂ ಸಂಗಮೇಶ್ವರನತ್ಸ್ತ್ರಮಲಕರ್ಣಿಕೆಯ ಮಧ್ಯದೊಳಡ
ಗುವಂ॥೧೮॥ ಅಲ್ಲಮಪ್ರಭುವಲ್ಲಿ ನಿರವಯವನೈದೆ ಬಳಿ । ಕಿಲ್ಲಿಯಾ
ಬಸವಣ್ಣ ನಿರದೆ ಸಂಗಮನಾಥ| ನಲ್ಲಿ ತಾನೈಕ್ಯವಾಗಲ್ಕಂಡು ಹಡಪದ
ಪ್ಪಂಣನೀನೀಲಾಂಬಿಗೆ॥ ನಿಲ್ಲದು ಸುರೀಶ್ವರುಂ ತವಿಷ್ಟಲಿಂಗಗಳ
ಲ್ಲಿ ತಾನೈಕ್ಯವಾಗು ಪರಾಗತಿ ಪಶರಣ । ರಲ್ಲಿ ಕೆಲಕೆಲರೈಕ್ಯವಾಗುವ
ರು ಸಿದ್ಧರಾಮೇಶನೀಂ ಕೇಳೆಂದನು ॥೧೯॥ ಬಸವದಂಡಾಧೀಶನೈದೆ
ತತ್ಪಟ್ಟಮಂ| ವಸುಧೀಶಬಿಜ್ಜಳೆಂನಮಗಕಟ್ಟ ವಸಾಗ| ಉಸಮುಕು
ಲವೆಂದು ಹಗ್ಗಿಯ್ಯಮೆಧುವಯ್ಯಗಳನೆಳೆಗೊಟ್ಟಯಂ ಕಟ್ಟಿಸೆ॥ ಹಸನಾ
ದುದೆಂದು ಜಗದೇವ ಬೊಮ್ಮಣ್ಣಂಗ । ಳೆಸಸ್ತೆತಿಗಪಂಜನವರಾಗಿ ಬಿ
ಜ್ಜಳರಾಯ| ನಸುಗೊಂಬೆವೆಂದೆಂಮುಕ್ತ್ಯಯಂ ಗಲಲಿಗಿನ ಪಸಾದವಂ
ಪಡೆದೊಯ್ವರು ॥೨೦॥ ಬಳಿಕಿತ್ತಬಾಗ್ಫೆನಪರ್ವವೆಂದಾಶರಣ|
ಕುಲಮನೆಲ್ಲವಕೆರಸಿಕೇಳ್ವೆವಿಲ್ಲಿ ರಬಾರ । ದುಳುಹೆಯ ಮಹಾಮನೆ
ಗೆಹೋಗಬೇಕೆನೆ ಕೆಲಬರೊಪ್ಪವರು ಮತ್ತವರೊಳು॥ ಕೆಲಬರೇ ಬಾ
ರೆವೆನಲವರನೆಲ್ಲರ ತಿರಿಗಿ ಕಳುಪಿ ಮಿಕ್ಕವರನೀ ಪುರದಿಂಗಲಾಗಳೇ| ಕ
ಳುಹುವೆ ಪ್ರಸಂಗಮೇಶ್ವರದಫೆನಪರ್ವವೆಂದೆಂಬನೆವದಿಂದೆಬೇಗ॥೨೧॥
ಇತ್ತ ನಾವೀ ಶರಣರೊಳಗೆ ಕೆಲಬರು ಸಹಿತೆ । ಜತ್ತಾಯತದೊಳಾನೆ
ಕುದುರೆ ಕಾಲಾಳುಗಳ| ವೊತ್ತು ಸಹಿತದಿ ಜತನವಾಗಿನಮ್ಮರಮನೆ
ಯನೇಕಾದು ಕೊಂಡಿರ್ಪೆವು ॥ ಅತ್ತಲಾ ಜಗದೇವ ಬೊಮ್ಮಣ್ಣನೀ

ವರ್ಗರುಂ| ಚಿತ್ತಹರುಷದೊಳ್ಳೈದಿ ಬಿಜ್ಜಳಮಹೀಪಾಲ| ನೊತ್ತಿನೊಳ
ಗೆಂದಿನಂದದೆ ಪಂಜುಗಳನುರೆಪಿಡಿದುಕೊಂಡಿರಲಾಗಳು|| ೨೨ ||ಓಲ
ಗದವರನೆಲ್ಲರಂಕಳುಪಿ ಬಿಜ್ಜಳನೃ | ಪಾಲನಾ ಪಂಜುಗಳ ಬೆಳಗಿನಿಂತ
ನ್ನರಾ | ಜಾಲಯವನೊಳಪೊಕ್ಕು ಬರಲಾಗಜಗದೇವ ಮೊಲ್ಲೆಯಾ
ಬೊಮ್ಮಣ್ಣನು|| ಬೀಳಲಿರಿದರಸನುದರವ ಬಗಿದು ಬಳಿಕಲ್ಲಿ ಕೇಳವೆ
ನಬೇಡ ಪರವಾಗಿಯುಂ ಕೊಂದೆವಂ| ಗಾಢಿ ಬೊಬ್ಬಿರಿವುತ್ತಲಿರ್ಮ್ಮರಾ
ಜಾಲಯಕ್ಕೃತಪ್ಪರುಷವದೊಳು || ೨೩ || ಬಂದು ತದ್ವಾರ್ತೆಯಂ
ಪೇಳ್ದವರು ಬಳಿಕಲಂ| ನಂದಿಸಿಂ ಕೈಲಾಸಕ್ಕೈದುವರು ನಾವಿರದೆ| ಮುಂ
ದಿ ಕುದುರೆಯ ಕೂಡಿಕೊಂಡಾಗಳೀ ಪುರವನತಿಗಳೆದು ಪೋಗುತ್ತಿರಲು||
ಹಿಂದುಗೊಂಡಳಿಯ ಬಿಜ್ಜಳನೊಡನೆ ಗಾಳಿಯುಂ| ಬಂದೆಮ್ಮ ತಡೆವತ
ಡೆಗೋಡಪ್ಪಿನಾವಾಗ| ಸಿಂದು ಕಾದುವೆನ್ನ ಕಾತರವಳ್ಳಿಯಲ್ಲಿ ಮುರು
ಗೋಡಿಂದ ಮುರಿಯುತ್ತಿವಿದು || ೨೪ || ಮಡಿವಳಯ್ಯಗಳ ಕೂಗಿ ಜನಾ
ರಿತಂದೆಗಳ| ನೊಡಗೂಡಿಕೊಂಡಳಿಯ ಬಿಜ್ಜಳನ ಸೇನೆಯಂ | ಮಡು
ಪಿ ತನ್ನೃಪತಿಯಂ ಕೈಸೆರೆಯ ಪಿಡಿದುಗೊಳಿಯಕೆ ಬರೆ ನಾಗಾಂಬಿಕೆ||
ಕಡು ನೊಂದು ಶಿವಶರಣರಿಂ ತಪ್ಪಕೊಲೆಗೂಡಂ | ಬಡುವರೇ ಸಾಕಿ
ನ್ನವನ ಬಿಟ್ಟು ಶರಣಮಂ, ಮಡಿದಸೇನೆಗೆ ಕೊಟ್ಟು ಕಳುಪು ನೀನೆಂ
ದೆನಗೆ ಪೇಳ್ದು ಮತ್ತಿಂತೆಂಬಳು || ೨೫ || ಬಸವಣ್ಣನೈಗಲಾ ಪಟ್ಟ
ಕ್ಕನೀನೆಂದು, ಸಸಿನದಿಂ ಮೂರುವರೆ ತಿಂಗಳ್ಗಯ್ತಷ್ಟರೊಳು | ಮನು
ಜೇಶ ಬಿಜ್ಜಳನನಿರಿದ ಶರಣರು ಶಿವನ ಪೊರೆಗೈದಾತನವರ| ಸಸನಾ
ಯ್ತು ಶಿವಭಕ್ತರಿಂತು ಬಿಜ್ಜಳರಾಯ| ನಸುಗೊಂಡು ಬಂದಿರಿದರಿಂದವ
ನಿಯೊಳು ಜನಿಸಿ| ಬಸಿದಶೂಲವನೇರಿ ಬನ್ನಿ ಮನಲವರು ಭೂಲೋ
ಕದೊಳು ಜನಿಸಿ ಬಳಿಕ || ಓರುಗಲ್ಲೆಂಬ ಪಟ್ಟಣದ ಹೊರಪುರದಲ್ಲಿ ವೀ
ರಗುಂಡ ಬ್ರಹ್ಮರೆಂಬ ಪೆಸರಿಂದಿರಲು, ಪುರಾರಿ ಬಂದು ಗಣಪತಿರಾಯ
ನರಮನೆಯ ಕಗ್ಗವೆರಮರೆಯ ಹೊಗಲು || ದಾರಿವಿಡಿದೈತಂದು ಕಲ್ಲೆ
ಗಂನೀವೆಮಗ| ತೋರಿಪೆನೆ ಮರೆಹೊಕ್ಕರಂ ಕೊಡದವರಿಗಾಗಿ, ಧೀ
ರರಾಗುಂಡಬ್ರಹ್ಮಯ್ಯಗಳು ಶೂಲಮಂ ಪತ್ತಿ ನೆರೆಮುಕ್ತರಹರು ||
ಅದು ಕಾರಣದೊಳೀಶಭಕ್ತರೀ ಕಾರ್ಯಮಂ | ಹೃದಯದೊಳು ನೆನೆ
ಯಲಾಗದು ಪೋಗಪ್ರೀತನಂ| ಪದುಳದಿಂ ತತ್ಪ್ರೇರಕರ ಕಳುಪೆಂದು ಸಾ
ಗಲಾಂಬಿಕೆ ನನಗೆ ತಿಳುಪಲಾನು | ಬೆದರಬೇಡೆಂದಳಿಯ ಬಿಜ್ಜಳನನ
ವನಾನೆ| ಕುದುರೆಕಾಲಾಳನೆಲ್ಲವನಿತ್ತು ಮಡಿದಿದರ್ಗೆ | ಚಮುರಂಗಕಂ
ಹಣಮಂ ಕೊಟ್ಟು ಪೋಗೆಂದೊಡಾತನಿಂದಿಂತೆಂದನು || ೨೮ || ಮುಂ

ಬೆನಗೆಗತಿಯಾವುದೆನೆಪಿಂತೆಬಿಜ್ಜಳಂ । ಮಂದಮತಿಯಿಂದೆಶಿವಶರಣ
ರಂಯೆಳೆಹೂಟಿ। ಯಿಂದೆಳೆಸಲಾಕೋಲೆಗೆಜಗದೇವನೊಲ್ಲೆಯಾಬೊ
ಮ್ಮಂಣನವರು ತಂನ॥ಕೊಂದರವನಂತೆ ನಡೆಯುದೆನೀಂಸದಾಚಾರ।
ದಿಂದೆನಡೆಯೆಂದಳಿಯಬಿಜ್ಜಳಂಗಾಗಲಾ। ನಂದದಿಂಪಟ್ಟಮಂಕಟ್ಟಿಬಳಿ
ಕಾಗಲಾನೃಪತಿಯೊಡನಿಂತೆಂಬೆವು॥೧೯॥ ಅರಸಕೇಳೀಪಟ್ಟವಿಂದಿ
ಗಿಂನರುವತ್ತು। ವರುಷಪರಿಯಂತರಂನಿನಗನಡವುದುಮುಂದೆ। ಹರ
ನವರದಿಂದೆರಾಕ್ಷಸಪೀತಾಂಬರಂತುರುಕಕುಲದಿಂದಜನಿಸಿ॥ ಪರಿವಿ
ಡಿಯೊಳಾಗಲೇಳ್ನೂರುಮೇಲೆಪ್ಪತ್ತು।ವರುಷಪರಿಯಂತರದೊಳಾ
ಳ್ವರೀದೇಶಮಂ। ತುರುಕಾಣ್ಯಮೆನಿಸಿಕಲ್ಯಾಣಮಂಕೆಡಿಸಿಕಲುಬು
ರಿಗೆಯುಂಕಟ್ಟಿಸುವರು ॥೨೦॥ ಹೀಗಿನ್ನು ತುರುಕಾಣ್ಯವಾಗುವುದು
ನಾವೀಗ। ಹೊಗಬೇಕೆಂದಳಿಯುಬಿಜ್ಜಳನಕಳುಹಲತಿ । ವೇಗದಿಂ
ಕಲ್ಯಾಣಪುರಕ್ಕೈದಿಬಿಜ್ಜಳಂಸತ್ತಹಾವಳಿಯುನಿಲಿಸಿ ॥ ಮೇಗೆತದ್ರಾ
ಜ್ಯಮಂಸುಖದಿಂದಲಾಳುವಂ । ರಾಗದಿಂದುಳಿವಿಯುಮಹಾಮನೆಗ
ನುವಿನ್ನು। ಸಾಗಬೇಕೆನೆಮಡಿವಳಯ್ಯನಾಹಿಪ್ಪರಿಗೆಗಿರದೆಕಳುಹಿ
ಸಿಕೊಂಬನು॥೨೧॥ ಇರದಲ್ಲಿತಮ್ಮಗುರುಲಿಂಗಣ್ಣಾರ್ಯನಪಾದ।ಸ
ರಸಿರುಹದಲ್ಲೈಕ್ಯವಾಗುವಂನಾವುಶಿವ। ಶರಣರೆಲ್ಲರಕೂಡಿಕೊಂಡಾ
ಗಲುಳಿವಿಗೈತರುವೆವತಿಸಂಭ್ರಮದೊಳು ॥ ಹರುಷದಿಂದಲ್ಲಿಘನಪ
ರ್ವಮಂಮಾಡಿತ। ತ್ಪರಮಮಾಹೇಶ್ವರರಕರುಣಮಂಪಡೆದಾಗ।ಶ
ರಣರೆಲ್ಲರುನಿಮ್ಮನಿಜದಲ್ಲಿನಿರವಯುವನೈದಿಮೆನಲವರಾಗಳು॥೨೨
ಹರಶರಣರೆಲ್ಲರುಂತಮ್ಮತಮ್ಮಿಷ್ಟದೊಳು । ನಿರವಯುವನೈದುವರು
ನಮ್ಮಸಮಯಾಚಾರ । ದುರುತರದಹನ್ನೆರಡುಸಾವಿರಂಬಸವಣ್ಣನ
ವರಸಮಯಾಚಾರದ ॥ ಪರಮಮಾಹೇಶ್ವರರೆಮೂರುಹನ್ನೆರಡು
ಸಾ । ವಿರವನಿಬರೆಲ್ಲರಂಹೊನ್ನರಳಿಯೆಂದೆಂಬ। ಮರಕೆತೊಟ್ಟಲಕ
ಟ್ಟಿತೂಗುವೆವುತೂಗವವರಿಗದೆನಿರವಯುಮಪ್ಪರು॥೨೩॥ ಸಾವಾಗ
ಲುಳಿವಚರಪತಿಗಳಿಗೆಶರಣೆಂದು । ದೇವರೆಲ್ಲರುನಿರಾಕಾರಮಂತಳೆ
ದಪಿರೊ। ಕೇವಲಂಸಾಕಾರದಿಂಪರ್ಪಿರೋನಿರೂಪಿಸುವದೆನಲವರಾ
ಗಳು ॥ ನೀವೆಲ್ಲರುಮ್ಮರಳಿಬರುವಪರಿಯಂತರಂ।ನಾವುನಮ್ಮಾರಾ
ಧ್ಯರಿತ್ತಪ್ರಸಾದಮಂ । ಸೇವಿಸುತಲತಿಗೋಪ್ಯದಿಂದಲ್ಲಿಕಲ್ಯಾಣಪ
ಟ್ಟಣದೊಳಿಹೆವೆಂಬರು॥೨೪॥ ಇಂತೆಂದುರುಗ್ರಮುನಿಮುಖ್ಯಾಚರಪ
ತಿಗಳಿಗೆ । ಸಂತಭಕ್ತಿಯೊಳೆರಗಿಬಳಿಕಾಗನಿನ್ನೊಡನೆ । ನೀಂತಡೆ
ಯುದೈದಿಸೊನ್ನಲಪುರದೆಶಿವಯೋಗನಿಜಸಮಾಧಿಯೊಳೆನಿಂದು॥ ಸೂ॰

ತೋಷದಿಂದಿಹುದು ನಾವಿನ್ನು ಮರಳಿಬರು | ವಂತನಕವೆಂದು ಸುರಿ
ರೇಚಣ್ಣನಂ ಪಿಂತೆ | ನಿಂತಲ್ಲಿ ಹಾವುಗೆಯ ಮರೆದು ಬಂದೆವು ಕೊಂಡು ಬ
ಹುದೆಂದು ಕಳುಹಿ ಬಳಿಕ ||೩೫|| ಅಕ್ಕನಾಗಾಂಬಿಕೆಯು ಸಹವಾ
ಗಿನಾವಲ್ಲಿ | ಮಿಕ್ಕ ಶರಣರ ನಿರದೆ ನಿರವಯವನೈದಿಸಿ ಬ | ಳಿಕಾಕ್ಕವು
ನಿರವಯವನೈದುವೆವು ಸಿದ್ಧರಾಮೇಶನೀಂ ಕೇಳ್ವುದಿನ್ನು || ಲಕ್ಷ
ಬಂ ಮೇಲೆ ತೊಂಬತ್ತಾರು ಸಾವಿರದ | ಲಕ್ಕದಿಂ ಮಿಗಿಲಾದ ಜಂಗಮಂ
ಚರಿಸುವೊಡೆ | ದಿಕ್ಕುದಿಕ್ಕಿಗೆ ಪೋಪರುಳಿದ ಚರಪತಿಗಳೇಕಲ್ಯಾ
ಣಕೈತರುವರು ||೩೬|| ಬಂದನಿಬರತಿ ಗೋಪ್ಯದಿಂದಿರುತಿರೆ ರುದ್ರಮು
ನಿ | ತಂದೆ ತನ್ನಯ ಶಿಷ್ಯ ಮುಕ್ತಿಮುನಿ ಜೊಡನೆ ನೀ | ನಿಂತೈದಿ ಸಕ
ಲದೇಶಂಗಳಂ ಚರಿಸುತ ದುಷ್ಟಪರವಾದಿಗಳನು || ಕೊಂದು ಶರಣರ
ಪೊರೆವುದೆಂದು ಸುರಿ ಕಳುಹಲಾ | ನಂದದಿಂದವನಿಳೆ ದೇಶಂಗಳಂ ಚರಿಸಿ
ತಾಂ | ನಿಂದು ಸಿರಿಗಿರಿಯ ಸಿಂಹಾಸನದಿ ಸಕಲ ಸದ್ಭಕ್ತರಂ ಪಾಲಿಸುವ
ನು ||೩೭|| ಇರುತಲೈವತ್ತಾರು ದೇಶಕ್ಕೆ ತಾವು ಸ | ದ್ವರಗಣಾಚಾರಿ
ಗಳ ಕಳುಹಿ ತಮ್ಮಾಜ್ಞೆಯಿಂ | ದಿರದೆ ಮೀರಿದರ ಕೈಯಿಂದ ಲಪರಾಧ
ಕಾಣ್ಕೆಗಳ ತಾಂ ತರಿಸಿಕೊಳುತ || ಪರವಾದಿಗಳ ನಿರದೆ ಸಂಹರಿಸುತಾ
ಗಲತಿ | ಹರುಷದಿಂದಿರಲತ್ತ ಮಲೆರಾಜ್ಯದೊಳು ದುರುಳ | ಘೋರ
ಜೈನರೆಪ್ಪತ್ತಿ ಶಿವಮತವ ಜರಿದು ವೀರೇಶನಂ ಕಿತ್ತು ಬಿಸುಡೆ ||೩೮|| ಈ
ವಾರ್ತೆಯಂ ಕೇಳ್ದು ಬಳಿಕಲಾ ಮುಕ್ತಿಮುನಿ | ದೇವರಾಜಾತಭಿ
ಕ್ಷಾವರ್ತಿಯೆಂದೆಂಬ | ದೇವರಿಗೆ ಪಟ್ಟಮಂ ಕಟ್ಟಿ ಕಾಣ್ಕೆಯನಿತ್ತು ತಂ
ನವರ ಶಿಷ್ಯನಾದ || ಕೋವಿದ ದಿಗಂಬರ ಮುಕ್ತಿಮುನಿ ಯೆಂದೆಂ
ಬ | ದೇವನಂ ಕರೆದು ನೀನೀಗ ಮಲೆರಾಜ್ಯದೊಳು | ತೀವಿರ್ದ ಪರವಾ
ದಿಗಳ ನಿರದೆ ಸಂಹರಿಸು ಹೋಗೆಂದು ಪೇಳ್ದ ತಾವು ||೩೯|| ಮಲ್ಲಿಕಾ
ರ್ಜುನಲಿಂಗದಲ್ಲಿ ನಿರವಯವಾಗೆ | ನಿಲ್ಲದೆ ದಿಗಂಬರ ಮುಕ್ತಿಮುನಿ
ಚರಪತಿಗ | ಳಲ್ಲಿ ಕೆಲಬರು ಸಹಿತ ಮಲೆದೇಶಕೈತಂದು ಖಾಂಡೆಯದಿ
ಬಂದು ನಿಂದು || ಖುಲ್ಲಪರವಾದಿ ಜೈನರ ನಿರದೆ ಸಂಹರಿಸಿ ಹಲ್ಲುಗಳ
ಕಳೆದು ಮಣಿವಿನ ಮೂರು ಖಂಡುಗವ | ನಲ್ಲಿ ಕಣಜವ ಕಟ್ಟಿ ತುಂಬಿಸು
ವರೆಲೆ ಸಿದ್ಧರಾಮೇಶ ಕೇಳೆಂದನು ||೪೦|| ಬಳಿಕಲ್ಲಿ ವೀರೇಶನಂ ಕಿತ್ತು
ಜೈನರು | ಹೊಳೆಯಲ್ಲಿ ಹಾಯ್ಕಿರಲು ತೇಗದು ಬಾಳೆಯ ದೊಂದು | ಎಲೆ
ಯ ದಂಡಿಗೆಯ ಮೇಲೊಲಿದು ಬಿಜಯಂಗೈಸಿ ತಂದಾಗ ಹೊಸ್ನೂರಿ
ನ | ಬಳಿಯಲ್ಲಿ ಗುಡಿಯಂ ಕಟ್ಟಿಸಿ ಪ್ರತಿಷ್ಠಿಸಿ ತಾವು | ನೆಲೆಯಾಗಿ ನಿಂದು
ದುರ್ಜನರ ಸಂಹರಿಸುವೊಡ | ಸ್ಥಳಮದೀಗೆಂದು ಬಾಳೆಯ ಹಳ್ಳಿಯೆಂ

ಬಪುರವೆಂಬೇಗೆಕಟ್ಟಿಸುವರು ॥೪೧॥ ಹರುಷದಿಂದಲ್ಲಿ ಸಿಂಹಾಸನಾಸೀ
ನನಾ। ಗಿರುತಾ ದಿಗಂಬರಸುಮುಕ್ತಿಮುನಿನಾಥನಾ। ಚರಪತಿಗಳೆ
ಲ್ಲೋರ್ವಯೋಗ್ಯನೆಂ ಕರೆದು ಪಟ್ಟವಗಟ್ಟಿ ಬಳಿಕವರೊಳು ॥ ಪರವಾ
ದಿಗಳನಿರದೆ ಸಂಹರಿಸುವುದು ತಮ್ಮ । ಶರಣರಂ ಪಾಲಿಸುವುದೆಂದು
ಸುರಿತಾಪಾಗ, ಪರಮಶಿವಯೋಗದಿಂ ನಿಜಸಮಾಧಿಯೊಳಿರ್ಪರೆಲ್ಲರಾ
ಮುಕೇಳೆಂದನು ॥೪೨॥ ವರದಿಗಂಬರಮುಕ್ತಿಮುನಿದೇವರಾಜ್ಞೆಯಿಂ।
ಹರುಷದಿಂ ಸುಕುಮಾರ ಚನ್ನಬಸವೇಶ್ವರಂ । ಶರಣಸಂಕುಲವನು
ರೆಪಾಲಿಸುತೆ ದುಷ್ಟಪರವಾದಿಗಳ ಸಂಹರಿಸುತ ॥ ಇರುತಿರಲ್ಕಿತ್ತಲೀ
ಚಿಕ್ಕಸಿದ್ಧೇಶ್ವರಂ। ಚರಪತಿಗಳಂ ಕೂಡಿಕೊಂಡು ಚರಿಸುತ್ತಬಂ। ದಿರ
ದೆ ಶಿವಗಂಗೆಗೈತಂದು ಹೊನ್ನಾದೇವಿಯಿಂದೆ ಕಂಕಣವ ಪಡೆವಂ ॥೪೩॥
ಬಸವೇಶನೈಕ್ಯವಾದರುವತ್ತುವರುಷವೀ । ವಸುಮತಿಯು ನಳಿಯು
ಬಿಜ್ಜಳನಾಳುತ್ರದುರ್ಗಬಳಿ । ಕಸವು ಬಲದಿಂ ತುರಕರೊಳು ಕಾಡಿವು
ಡಿಯುಲಾ ತುರುಕರತಿಶಾಸನದೊಳು ॥ ಎಸವ ಕಲ್ಯಾಣವಂ ಕೆಡಿಸಿ
ಕಲುಬುರುಗೆಯಂ। ಹೊಸತಾಗಿ ರಚಿಸಿ ತ್ರಿಪುರಾಂತಕಾಲಯದಲ್ಲಿ। ಪೆ
ಸುಗಳ್ಕೊಂಡು ಗರುಡಕಂಬವನ್ಮುರಿದು ಮಸಿದಿಯಂ ಕಟ್ಟಿಸು
ವರು ॥೪೪॥ ಎಲೆಸಿದ್ಧರಾಮೇಶ ಕೇಳ್ವುದೀ ಕಲ್ಯಾಣ। ವಳಿಯಲಾ
ಪ್ರಜೆಗಳಂ ತುರುಕರಾಕ್ಷಸರಾಗ । ಸುಲಿದು ಸೂರ್ಯಾಡಲಾಗುಂಪ
ಣಂಪೆಮ್ಮಣಯ್ಯಗಳೆನಿಪವೃತ್ತಿಗಳಿರದೆ ॥ ನೆಲೆಗೆಟ್ಟು ಪೋಗಿ ದಕ್ಷಿಣ
ಕಾಸಿಯೆನಿಸಿಭೂ । ತಳದೊಳಗೆ ಮೆರವಶಿವಗಂಗೆಯುಸವಿಪಾಪಸ।
ಸ್ಥಳದೊಳಗೆ ಪುರವನುರೆರಚಿಪರಾಗುಮ್ಮಣಂಪೆಮ್ಮಣಯ್ಯಗಳೆಂಬ
ರು ॥೪೫॥ ಪರಮೈಕ್ಯರಾಸಕ್ತವಿಗಿಲೆನಿಸಿಗುಮ್ಮಳಾ । ಪುರವೆಂಬ
ನಾಮಪೊಂದುಸ್ಥರಿಪರೆಂತೆನಲು । ಚರಲಿಂಗದಮಳೆಪಾದೋದಕವ
ನೇಮಂಣಸಿಯ ಬಿಂದಿಗೆಯು ತುಂಬಿ ॥ ಸರಿವಾಣದೊಳಗಿರಿಸಿಹೊ
ತ್ತುಕೊಂಡು ಪುರವ। ತಿರುಗಿಬಂದಾ ಮಧ್ಯದಲ್ಲಿ ನಿಕ್ಷೇಪಿಸೀ। ಪುರವ
ನೇಲಿಂಗವಿಲ್ಲದಭವಿಯುಸೊಗಲಳಿಯಲೆನುತಲಾಜ್ಞಾಪಿಸುವರು ॥೪೬॥
ಆಸ್ಸೈರಾಮೇಶ ಬಳಿಕೆನ್ನಾಪುರಂ ॥ ಭೂಲೋಕಕರಿದೆನಿಸಿಮೆರ
ವ್ರನಸ್ಥಳದಲ್ಲಿ। ಧೂಳಿಪಾವಡವಾದಿಸರ್ವಾಂಗಪಾವಡಂ ಕಡೆಯಾ
ಗಿಕವು ದೊರೆಸವ ॥ ಶೀಲಂಗಳರವತ್ತನಾಲ್ಕುಮುವನಡಿಸುವಾ। ಶೀ
ಲವಂತರೆಬಹಳವವರಸುಮಹಾತ್ಮೆಗಳ। ಪೇಳಲೆನ್ನಳವಲ್ಲವೆಂದಾಗ
ಚನ್ನಬಸವೇಶ್ವರಂ ನಿರವಿಸಿದನು ॥೪೭॥ ಚಾರುಚರಲಿಂಗಕ್ಕೆ ಸದ್ಭ
ಕ್ತಿಯಿಂದಾಗ। ವಾರಿಯಿಂದೆಡೆವಿಡದೆದಾಸೋಹಮಂ ಮಾಳ್ಪ । ವೀ

ರಶೈವಾಚಾರಸಂಪನ್ನಸದ್ಭಕ್ತರಲ್ಲಿರುವರದು ಕಾರಣಂ॥ ಧಾರುಣಿಗೆ
ಮಿಗಿಲೆನಿಸಿತದ್ದೇಶವೆಸವುದಾ। ಚಾರವೆಪ್ರಾಣವೆಂದೆನಿಸಿತದ್ರಾಜ್ಯ
ದೊಳ। ಪಾರಮಹಿಮರಿಜನಿಸಿನೆರೆಬಾಳ್ವರೆಲೆ ಸಿದ್ಧರಾಮೇಶಕೇ
ಳೆಂದನು ॥ ೪೮ ॥ ಮುದದಿಂದಲಲ್ಲಿಧನಸಂಪನ್ನಸೆಟ್ಟಿಗಳು । ಪುದಿದಿ
ರ್ಪಕಾರಣಂಸೆಟ್ಟಿನಾಡೆನಿಪುದಗು । ಪದುಳದಿಂಸಕಲ ಸೌಭಾಗ್ಯ
ದಿಂಪ್ರಭುಗಳಿರೆಪಬುವಾಡವೆಂದೆನಿಪುದು ॥ ಸದಮಲಜ್ಞಾನಸಕಲಾ
ಗಮಪುರಾಣಕೋವಿದಸಕರ್ಣಾಟಕಾವ್ಯಸಿಳೆಶಾಸ್ತ್ರವಬಲ್ಲ। ಚದು
ರರಿರೆಕರ್ಣಾಟವೆನಿಪುದೆಲೆಸಿದ್ಧರಾಮೇಶನೀಂಕೇಳೆಂದನು॥೪೯॥ ಚಿ
ತ್ರಶುಪ್ತಿಯೊಳಾಸೆಲೆರಾಮುಳಿಕಲ್ಯ। ವತ್ತಾರುದೇಶಕ್ಕೆಕರ್ಣಾ
ಟದೇಶವೇ । ಉತ್ತಮಮದಲ್ಲಿರ್ಪಶಿವಭಕ್ತರೆಲ್ಲರುಂಸತ್ಯರುಸದಾ
ವ್ರತಿಗಳು ॥ ಮತ್ತಿನ್ನುಮಿಕ್ಕದೇಶಗೊಳೆಲ್ಲಗಲ್ಲಿಗಂ । ಹತ್ತುಸಾವಿರ
ಲಕ್ಷಕೋಟಿಗೋರ್ಕೋರ್ವರೇ। ಚಿತ್ತಜಾರಿಯುಶರಣರುದಿಸಿನಾನಾ
ಪಾಡಂಗಳಂನೆರೆಮೆರೆವರು ॥೫೦॥ ಶಾಲಿನಾಥನಶಕದೊಳೆಂಟನೂ
ರಿಂಗಲಾ । ಮೇಲಣವಿಳಂಬಿವತ್ಸರಚೈತ್ರಶುದ್ಧದೊಳು । ಮೇಲಾ
ದುದಶಮಿಯಾಗುರುವಾರದುದಯದೊಳುಗಳಿಗ ಹನ್ನೆರಡಾಗಲಾ ॥
ವೇಳೆಯೊಳುಹೊಯ್ಸಳೆಗಪಟ್ಟವಂಕಟ್ಟಲವೆ । ನಾಳುತ್ತಿಪ್ಪಿಳೆಯೊ
ಹೊಯ್ಸಳರಾಜ್ಯವೆನಿಪುದಗು । ಲೀಲೆಯಿಂಗವನಾದಿಯಾದವನಬ
ಲ್ಲಾಳರೊಲಿದಾಳ್ವರಾಧರೆಯನು॥೫೧॥ಆತಿಸವರೊಳುವಿಷ್ಣುವರ್ಧ
ನನೆನಿಪ್ಪಬ । ಲ್ಲಾಳಸತಿಸುಖದಿತದ್ರಾಜ್ಯನಾಳುತ್ತಲಾ। ಪೇಲಾ
ಪುರದೊಳೊಂದುಗುಡಿಯನೊಲವಿಂದಕಟ್ಟಿಸಿಪಮಸಂತಸದೊಳು॥
ಗಾಳಿಪುರಾಣಿಯೊಳಿದ್ದವಿಷ್ಣುವಂತೆಗತರಿಸಿ। ಲೀಲೆಯಿಂದಾಗುಡಿಯೊ
ಳುಂಪ್ರತಿಷ್ಠಿಸಿಬಳಿಕ । ಪೇಳಲೇನಲ್ಲಿಹೊಲೆಹದಿನೆಂಟುಜಾತಿಯುವ
ರೊಂದಾಗಿಸಲೆನಡವರು॥೫೨॥ ಹಳೆಯಬೀಡಂಬಪಟ್ಟಣದಲ್ಲಿಕರಣಿ
ಕರ । ಕುಲತಿಲಕನೆನಿಸುವಹರೀಶ್ವರನಲೆಕ್ಕವಂ । ಯುಳ್ಳಯಾಣ್ಮ
ಬಲ್ಲಾಳಕೇಳುತ್ತಿರೆಕಡಿತವಂಬಿಟ್ಟುಕೃಗಳನೋಡಸಲು॥ ತ್ರಿಳಿಪಿದ
ವೃತ್ತಕವನೆಂದು ಭೂಪಂಕೇಳೆ। ಬಳಿಕಪೇಳ್ದಂವಿರೂಪಾಕ್ಷನಾಲ
ಯದೊಳಗೆ। ಹೊಳವಪೇಪಂಸೋಂಕಿತೆರೆಸೀದಬೇಪ್ಪತಿಲಲಿಸಿ
ದೆಕೇಳೆಂದನು ॥೫೩॥ ಎಲ್ಲಿಯವಿರೂಪಾಕ್ಷನಾಲಯದತೆರೆಸೀದ । ಎ
ಲ್ಲಿನೀನೆಲ್ಲಿಯುಚ್ಚರಿಯೆಂದುಭೂಮಿಪತಿ। ನಿಲ್ಲದೋರ್ವನಕಳುಪಿಕೇ
ಳಸೆವಿರೂಪಾಕ್ಷಲಿಂಗನಾಸ್ಥಾನದವರು॥ ಇಲ್ಲಿಯೆಹರೀಶ್ವರಂತೆರೆಸೀ
ಯುರಿಯೆಕರ। ಪಲ್ಲವದೊಳಾರಿಸಿದನೋಡೆಂದುತೋರಲದ। ನೆ

ಲ್ಲವಂ ಮರಳಿಬಂದಾ ಚರಂ ಭೂಪತಿಗೆಪೇಳ್ದಂ ಸವಿಸ್ತರದೊಳು ‖೫೪‖
ಚರನೆಂದ ಮಾತ್ರಿಗಳ್ಸರಿವಟ್ಟು ಧರಣಿಪಂ । ಹರಿಯಣ್ಣನೀಂ ವಿರೂಪಾ
ಕ್ಷನಾಲಯದಲ್ಲಿ। ಬರದು ಕೊಂಡಿಸುದೆಂದು ಕಳುಪೆ ಪಂಪಾಕ್ಷೇತ್ರಕ್ಕೆ
ತಂದ. ಬಳಿಕಾತನು ‖ ವರವಿರೂಪಾಕ್ಷನೊಪ್ಪಿತದರಗಳಿಗಳನಾ। ಪ
ರಿಪರಿಯ ಶಿವಗಣಂಗಳ ಮೇಲೆ ಪೇಳ್ದು ಸ। ಗಿರಿಜಾ ವಿವಾಹವಂ ಪೇಳ್ದಾ
ವಿರೂಪಾಕ್ಷಲಿಂಗದಲ್ಲೈಕ್ಯವಹನು ‖೫೫‖ ವರಸರೀಶ್ವರನ ಸೋದ
ರದಳಿಯನುಭಯಕವಿ । ಶರಭಭೇರುಂಡನೆಂದೆಂಬ ನಾನಾ ಪರಿಯ।
ಬಿರಿದಂಕಕನಿರಾಘವಾಂಕನಿರಲೋರುಗಲ್ಲೆಂಬ ಪಟ್ಟಣಕೆ ಪೋಗಿ‖ ಪ
ರವಾದಿಗಳನಲ್ಲಿ ಗೆಲ್ದು ವೀರೇಶನಿಂ। ದರಿದೆನಿಪ ಪದಕವಂ ಪಡೆದು ವೇ
ಲಾಪುರಿಗ । ಮರಳಿಬಂದಲ್ಲಿಗೇಶವನುಳಿದು ವರಸಮಾಧಿಯೊಳಿರ
ಲೆಬಯಲಪ್ಪನು ‖೫೬‖ ಮತ್ತೆ ಕೇಳಲ್ಲಿಪದ್ಮರಸನೆನಿಸುವ ಬಂಮ ।
ಣೋತ್ತಮಂ ವೀರಶೈವಾಚಾರ್ಯರೆನಿರಲಲ್ಲಿ। ಗತ್ತಗಂಬಗುತ್ತಿ ಭುವ
ನತಾತನೆನಿಪನವಲ[illegible]ಸೆವಾದವಮಾಡಲು। ಚಿತ್ತ[illegible]ದರಿದವನತ್ರೈ
ಣಪುರುಷನಿಂ ಗೆಲ್ದು । ಚಿತ್ತರದಿ ವೀರಶೈವೋಪದೇಶವನಾಗ। ಳಿತ್ತು
ವರಶಿಷ್ಯನಂ ಮಾಡಿಕೊಂಡಿರೆ ಬಿಟ್ಟ ಬಲ್ಲಾಳನವರಕರಿಸಿ ‖೫೭‖ ಬಳಿ
ಕಲಾ ಪದ್ಮರಸರೇನೀವೆನನುಗೊಂಡು। ಬಲುಗೆರೆಯ ಕಟ್ಟಸೆಂದಧಿಕ
ಧನವಂ ಕೊಟ್ಟು । ಕಳುಗಲಾರೊಕ್ಕಮಂ ಜಂಗಮಾರ್ಚನೆಯನಲ
ವಿಮ್ಮಡಿಸಿ ಶಿವನೊಲವಿನಿಂ ‖ ತಳುವದಾಕೆರೆಯ ಕಟ್ಟಸಲರಸನಾ ಕೆರೆ
ಯ । ಕೆಳಗಿಸ್ಪಬಯಲನೆಂಬತ್ತೆಂಟು ಮಂದಿಯಾ । ಸ್ಥಲದ ಬಮ್ಮರಿ
ಗಿತ್ತು ಕೆರೆಯ ಪದ್ಮರಸರಂ ಪೊಗನೋಡುತಿಂತೆಂದನು ‖೫೮‖ ನಿಮ
ಗಾವ ಬಯಲಾಗಬೇಕು ನಿರವಿಸುವುದೆನ । ಲಮಗೀ ಮಹಾಬಯಲೆ
ನುತ್ತಾಗಲಾ। ಸುಮತಿ ಸಕ್ಕೆರೆಯ ಪದ್ಮರಸರಾಬಯಲಲ್ಲಿ ಬಯಲಪ್ಪ
ರಿನ್ನಾಲಿಸು ‖ ವಿಮಲಚರಿತಂ ಪಾಲ್ಕುರಿಕೆಯ ಸೋಮೇಶ್ವರಂ । ಕ್ರ
ಮದಿಂದಲರುವತ್ತು ನಾಲ್ಕು ಶೀಲವನಡಿಸಿ। ಸುಮನದಿಂ ಕಲ್ಯಕೆಬಂ
ದಲ್ಲಿ ಶಿವಸಮಾಧಿಯಲಿ ನಿಜಮುಕ್ತನಹನು ‖೫೯‖ ಮೋಪೂರಿನಿಂದೆ
ಭೈರವರಾಜನಧಿಕಪ್ರ । ತಾಪದಿಂ ಮುಲ್ಲಿಪಟ್ಟಣಕೆ ಬಂದಲ್ಲಿಪ್ಪ। ಭೂ
ಪತಿಯು ಕಂಡೆಲ್ಲರಂ ಗೆಲ್ದು ಜೇಂಟೆಯ ಪವಾಡದಿಂ ಲಿಂಗಂಗಳಂ‖ ಸ್ತ್ರೀಪು
ರುಷರೀರ್ವರುಂ ಗರುಷದಿಂ ವೀರಶೈ। ವೋಪದೇಶವನಾಂತು ಸಾಸಿಲಿ
ಗೆಪೋಗಿ ಬಿ । ದ್ರೂಪನೊಳು ಕಾದಿ ಕೈಲಾಸಕ್ಕೆ ಪೋಪರೆಲೆರಾಮೇಶ
ಕೇಳೆಂದನು ‖೬೦‖ ಆಲಿಸಾ ಸಾಸಿಲಂಬೂರಲ್ಲಿ ಬಳಿಕಸ । ಲ್ಲೀಲೆಯಿಂ
ಸೋಮೇಶಲಿಂಗಟಂಘನವಾಗಿ। ಹಾಲುಸುರಿವುದು ನೋಡಲಾಸಮಾ

ಪದೊಳೆಕೆಂಡದವುಳಿಯಕರೆವುದಿನ್ನು॥ ಭೂಲೋಕಕಧಿಕಗಿಂಮೆಱ
ವುತಿಹಸಿರಿಗಿರಿಯ। ಮೇಲೆನೇಸಿಯರುಗುಡಿಲಂಕಟ್ಟುವರುಬಳಿಕ।
ಪೇಳಲೇಂಸುರೆಯನುರೆವಾರುವರುಮತ್ತಲ್ಲಿನೆತ್ತರಿನಹೊಳೆಹರಿವು
ದು॥೭೧॥ ದಿಂಡುಗೂಗಲ್ಲಿನಾಗಾಭಕ್ತನಿರುತಲು। ದ್ದಂಡಭಕ್ತಿಯಲಿ
ಜಂಗಮಕೆನೀಡುತ್ತಿರ। ಲ್ಕಂಡಲದುಹಣಹೊನ್ನಬೇಡೆಸಾಲವತೆಗ
ದುನೀಡೆಬಹುರುಣವಾಗಲು॥ ಬಂದಪರಶುವಿನಕೈಯಿಂದಲಾಹೊ
ನ್ನತೆ। ಕೊಳ್ಕಂಡುಸಾಲವತಿಟ್ಟಿಗುಟಿಯಾಗಿಬಳಿಕಭೂ। ಮಂಡಲಂ
ಬೆರಗಾಗಿನೋಡುತಿರೆಕೈಲಾಸಕ್ಕೈದುವಂಸಂಭ್ರಮದೊಳು॥೭೨॥
ಹರಭಕ್ತನೆಂಬನೇ ಕಂಪನೂರಾಂಡಿಯಾ। ಪರಮವೇದಂಗಳಿಗ
ಭಾಷ್ಯಮಂಮಾಡಿತಾ। ನಿರುತಸ್ಥಿಸರಸಿಯೊಳಗಳಿಯನಂಪುಗಿಸಿ
ಮಣಿಕರ್ಣಿಕೆಯೊಳೂಡಿದೆಬ್ಬಿಸಿ॥ ಗರುಷದಿಂರಂಗಸಾಧನಕೈಯ
ಬಾಗಿಲಂ। ತೆರಸಿಮುಖಮಂಯತ್ತೋರಿಶಿವನವರದಿಂತನ್ನ। ಪುರ
ದುಭಯಕೇರಿಯೊಳಗಿರ್ದರಂ ಕೈಲಾಸಕೊಯ್ವನತಿಸಂಭ್ರಮದೊ
ಳು॥೭೩॥ಎಲರಾಮಕೇಳಿನ್ನುಪೆಕ್ಕಲೂರೊಳಗೀರ್ವರ್। ಸುತಿಯ
ಕಾಯಕದಕಲ್ಲುಪ್ಪನಿರುತೊಂದುದಿನ। ಹೊಲದೊಳೂಣಗಿಡನಾರಸೆ
ತ್ತುತಿರೆಹಾವ್ಕಚ್ಚಿಮಗಸಾಯೆತಾನುತಪ್ಪ॥ ನುತಿಯವಿಸ್ಮಯದಿಂ
ದೆಜಂಗಮಾರ್ಚನೆಮಾಡಿ। ನಲವಿನಿಂತೀರ್ಥಪ್ರಸಾದಮಂಮಗಗೂ
ಡೆ। ಮಲಗಿದವರೆಳ್ದಂದವಂದೇಳೆ ಶಿವಪದ ಶಿವಪುರಕ್ಕೆಯ್ದಿದೊ
ಯ್ವನು ॥೭೪॥ ಕರಿಯದೇವನಿಪ್ಪಪುರದಲ್ಲಿಮಂಮಡಿಭಕ್ತ। ನಿ
ರುತಜಂಗಮಕೆವ್ಯಾಪ್ತಿಷ್ಟನಂನೀಟತಾ। ನಿರದವರಿಗೊಂದೊಂದು
ವಸ್ತ್ರಮಂಕೊಡುವನ..ಕೋರ್ವಜಂಗಮನಾತನ॥ ಅರಸಿಯುಡಪಿ
ಟ್ಟಸೀರೆಯನುಟ್ಟುಕೊಂಡಾಗ। ಬಾಲರಸೇಗಬೇಡಿದೊಡಿತ್ತುಬ
ಳಿಕಪಕೆ। ಪರಮಾಪಾದೋದಕವತಳಿಯುಲಾಸೆಗಬರಲಡಪಿನವ
ಗಿತ್ತುಮೆರೆವ॥೭೫॥ ಪೆರುಮೆನಿಸುನಿಪ್ಪಪುರದಲ್ಲಿದೇವಮ್ಮತಾ।
ನಿರುತಜಂಗಮಕೆಮಾರಪತ್ರದಾಸೋಹಮಂ। ಪರಿವಿಡಿಯೊಳೂದ
ಗಿಸಾಡುತ್ತುಮಿರಲೋರ್ವಜಂಗಮತನ್ನಪುಚ್ಚಿಚರ್ಮವ॥ ಗುರುತಿ
ನಿಂಬೈಚಿಡುವುದೆಂದಿತ್ತುಪೋಗಿತಾಂ। ಮರಳಿಬಂದಾಚರ್ಮವಂ
ಬೇಡೆಲ್ಲದಿರ। ಲರಿತುತಾತಂನದೇಸದಚರ್ಮಮಂಕೊಡುವಳೆಲೆ
ರಾಮಕೇಳೆಂದನು॥೭೬॥ ಕಂಚಿಯೊಳುಬಯಲಿಂಗಂಣನತಿಮಾದ
ದಿಂ। ಪಂಚಾಕ್ಷರೀಮಂತ್ರವೇಮಹಾಘನವೆಂದು। ಸಂಚಿಕೆಯಚೀಟ
ನಿಂಬರದದಂ ತೂಗಿಮೆರವಂಮತ್ತೆಕೇಳ್ವುದಿನ್ನು॥ಮಿಂಚುತಿಹಕೈ

ನಿಡವಿಸಿದನು ||೨೩|| ಹರಿಭಕ್ತನುಪ್ಪಲಿಕರಂಣಪ್ಪನಿರೆಶಿವಂ| ಸರಭಕ್ತನಾಗೆಂದೊಡಾಗಲಾಮುಗ್ಗುಗಳ್| ವಿರದೆಪಾದಕ್ಕೆಳಿಯೆಪದವಾಗಿಗಳುಕಂಡು ಮಾದವಮ್ಮಾಡಲಾಗ || ಹರನೊಲವಿಸಂಪಾಳುಗೆರೆಗಳಂಬೇಸಗೆಯೊಳಿರದೆಮಳೆಯುಂಬರಿಸಿತುಂಬಿಸಿಬಳಿಕ್ಕಲಾ| ಪರವಾದಿಗಳನೆಲ್ಲರಂಗೆಲಿದು ಮೆರವನಂ ಶಾಭಕ್ತನೊಲವಿನಿಂದಂ||೨೪|| ವರಸುಗ್ಗಲೂರಲ್ಲಿ ಕಾಟಿನಾಯಕನೆನಿಪ | ಹರಿದಾಸನಿರುತೆಬೇಂಟೆಗೆ ಪೋಗಿಪೊಲನಕಂ | ಡಿರದೆಬೆಂಬತ್ತಲದು ಕೆರೆಯೊಳಗೆ ಬೀಳೆತಾನುಂಕೂಡೆಬಿದ್ದು ಪಿಡಿಯೆ || ಪರಮಶಿವಲಿಂಗವಾಗಿರೆಕಂಡು ತಾನದಂ| ಧರಿಸಿಮಹಲಿಂಗದೇವಯ್ಯನೆಂದಾಗತಾಂ| ಕರಿಸಿಕೊಳುತತಿನಿಷ್ಠೆಯಿಂದಿರದೆಬಳಿಕಲಾಲಿಂಗದೊಳಗೊಡವೆರನು ||೨೫|| ಅಸಗೋಚೆಮಲ್ಲಪ್ಪಯುಂ ತನ್ನ ಹೋರಿಯುಂ | ಬಸವನಂಬರೆದು ಬಿಡಲದು ಕೆಲವು ದಿವಸಕಂ | ದಸುವಳಿಯಲದರೊಡನೆ ತಾನು ತನ್ನರಸಿ ತನ್ನಯ ಮಗನುಮಗನರಸಿಯುಂ || ಬಸವನೊಡನೆಸಮಾಧಿಯುಂ ಕುಳಿತು ಜನರೆಲ್ಲ| ಹೊಸತೆನುತಚೋದ್ಯದಿಂ ನೋಡುತಿರಲಳಿದಿರ್ದ| ಬಸವನಸುಪದಣಮಂಪಡೆವರೆಲಿಸಿದ್ಧರಾಮೇಶನೀಂ ಕೇಳೆಂದನು || ಇಂತಿವರುಮೊದಲಾದಶಿವಶರಣರಲ್ಲಲ್ಲಿ| ಸಂತಸದಿ ನಾನಾಪವಾಡಂಗಳಂ ಮೆರದು| ಕಂತುಹರನೊಲವಿನಿಂ ನಿಜಪದವಿಯುಂ ಪಡೆದ ರೆಲರಾಮ ಕೇಳ್ವುದಿಂನು || ಮುಂತೆಹೊಸಮಲೆಯಸ್ಥಿಕಂಪಲನೆನಿಪ್ಪಭೂ | ಕಾಂತನಿಹನವನಸುಕುಮಾರಕಂರಾಮ ನಾ| ಸಂತನಗೆಕುಮ್ಮಟವೆನಿಪ್ಪದುರ್ಗವನಿರದೆಕಟ್ಟಸುವನತಿರ್ಯಿಂದಂ ||೨೬|| ಅಲ್ಲಿತಾನಿರುತೆಸುತ್ತಣಭೂಮಿಪಾಲಕರ| ನೆಲ್ಲರಂಗೆಲ್ದು ಹೊಗಳಿಸಿಕೊಳಲದಂ ಕೇಳ್ದು| ದಿಲ್ಲಿಯಿಂ ದಿರದೆಲಕ್ಕಗಮೇಲೆ ತೋಂಭತ್ತಾರ್ವಿರಂ ಕುದುರೆಸಹಿತ|| ಬಲ್ಲಿದಸುಲ್ತಾನರಾಕುಮ್ಮಟಕೆದಾಳಿಯುಂ | ನಿಲ್ಲದೈತಂದು ತಾವೀರ್ವರುಂ ತಾದಿಬಳಿ| ಕಲ್ಲಿ ಜೇಬಯಲಪ್ಪರಾಗಲಾಕುಮ್ಮಟಂ ಪಾಳಪ್ಪುದೇನೆಂಬೆನು ||೨೭|| ಇಂತೆಸವಚನ್ನಬಸವೇಶ್ವರಪುರಾಣಮಂ| ಸಂತಸದಿ ಬರದವರ್ಗೋದಿದರ್ಗರ್ಥವಾ| ದ್ಯಂತಮಂಬಿಡದೆಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯುಂ ಕೇಳ್ವವರ್ಗೆ|| ಸಂತತಂ ಸಕಲಸುಖಮಂ ಸಕಲಭೋಗಮನ | ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನಾ| ಕಂತುಹರನಪರಾವತಾರನೆನಿಸುವಚನ್ನಬಸವೇಶನಕ್ಕರಿಂದಂ ||೨೮||

ಐದನೆಯಕಾಂಡದಲ್ಲಿ ೯ನೇಸಂಧಿ ಮುಗಿದುದು.

ಅಂತು ಸಂಧಿ೬೧ಕ್ಕಂ ಪದ೨೭೮೯ಕ್ಕಂ ಮಂಗಳ.

## ೧ನೇ ಸಂಧಿ

ಸೂಚನೆ॥ ಹರನಾಜ್ಞೆಯಿಂ ಗಂಧ್ರ್ವಸಹಸ್ರಾಗಿ ನೂರೊಂದು। ಪಿತ ತರಿಳೆಯೊಳ್ದ್ವನಿಸಿ ಬಿಯಲಾಗಲೇಳ್ವರು। ಪಿರತರುಂ ಸಂಜನಿಸಿ ಪೋಗ ಶ್ರೀಬಸವಾದಿ ಶರಣರುಂ ಜನಿಯಿಸುವರು॥

ಪದ॥ ಸಾರಂಗದೈತ್ಯಚರ್ಮಾಂಬರಧರಂ ದೇವ। ಸಾರಂಗಧರಕಲಾಜೂಟವಿಲಸದ್ದೇವ। ಸಾರಂಗವಾಹನಾರ್ಚ್ಯಪಿಕ ದೇವರದೇವ ಸಾರಂಗಪಾಣಿ ದೇವ॥ ಸಾರಂಗಧರಪರಮಪಾವನ ಮಹಾದೇವ। ಸಾರಂಗವೈರಿವಾಹನೆಯಾಣ್ಮನೇ ದೇವ। ಸಾರಂಗವದನಪಿತ ಪಂಪಾವಿರೂಪಾಕ್ಷ ಸಾರಂಗಪದವೀವುದು ॥೧॥ ಆಸೈಶಾಲಿವಾಹನಶಕದ ಸಾವಿರದ। ನೋಲಬಿನ್ನೂರೈವತೆಂಟರಿಂಗಂ ಮುಂದೆ। ಪೇಳ್ವೆಂ ಧಾತು ಸಂವತ್ಸರದ ವೈಶಾಖ ಶುದ್ಧ ಸಪ್ತಮಿ ಸುದಿನದೆ ॥ ಲೀಲೆಯಿಂ ಹರಿಹರಗೆ ಪಟ್ಟಮಂ ಕಟ್ಟಲವ। ನಾಳುವಂಶದಿ ಮೂರು ಪಟ್ಟ ಪರಿಯಂತರಂ ಪೇಳ್ವೆಂ ತನ್ನ ಸಂತತಿಗೂಡಿ ನೂರೈವತ್ತೈದು ಸಂವತ್ಸರವನು ॥೨॥ ಆಲಿಸಾನೆಯುಗುಂಧಿಯಲ್ಲಿರುತೆ ಹರಿಹರನೃ। ಪಾಲನಂ ಶೋಗ್ನಮಂ ಪಂಪಾವಿರೂಪಾಕ್ಷ। ನಾಲಯಸಮೀಪದೊಳು ವಿದ್ಯಾನಗರಿಯೆಂಬ ಪಟ್ಟಣ ವರಚಿಪನಿತ್ತು॥ ಲೀಲೆಯಿಂದಮರೇಂದ್ರನತಿವಿಭವದಿಂ ಪಭವ। ನೋಲಗಕೆ ಪೋಗುತಿರೆ ಕೈಲಾಸಪರ್ವತದ। ಮೇಲೆ ವಿಕಟಾಂಗದ ಗಣೇಶ್ವರರ ಕಂಡು ತನ್ನ ವರ ಕೂಡಿಂತೆಂಬನು ॥೩॥ ನೋಡುವರಿಗೆ ಶಿವನ ಲಾಂಛನಮುದಿಲ್ಲಿನರ। ಗಾಡಿಯೋಸ್ರೊಸ ತಭವಿಗಳೊ ಕಾಣಬಾರದೆಂ। ಪಾಡಲವನೆಲ್ಲವಂ ಕೇಳ್ದವರು ಕಡುಕೋಪದಿಂದೆ ಸುರಪಾಲನೀನು ॥ ಮೂಢನೇ ಸವ್ವ್ರಮಹಿಮೆಯನರಿಯದೇ ಹೋಗ। ಲಾಡುವುದು ನೀತಿಯೇ ಕೇಳ್ವುದದು ಕಾರಣಂ। ಗಾಢದಿಂ ಧಿಳೆಯೊಳಗೆ ಭವಿಯಾಗಿ ಪುಟ್ಟಿ ಪೋಗೆಂದಾಗ ಶಪಿಸುವರು ॥೪॥ ಸುರಪನಾ ಶಾಪಮಂ ಕೈಕೊಂಡು ಬಂದೊಡನೆ। ಹರಗಬಿನ್ನವಿಸಲದನರಿದಾ ಗಣೇಶ್ವರರ। ಮರಶಾಪಮಂ ವಿಹಾರ ಬಾರದದು ಕಾರಣಂ ಪ್ರೌಢದೇವೇಂದ್ರನೆಂಬ॥ ನರಪಾಲನಾಗಿ ಜನಿಸೆಂದಾ ಗಣೇಶ್ವರರ। ಕರೆಸಿ ನೀವನಿಬರಾ ಧಾರುಣಿಯೊಳು ಬಸಿಬಳಿ। ಕಿರದಲ್ಲಿ ಮಹಿಮೆಗಳ ತೋರಿ ನಿರವಯವಾಂತು ಬಹುದೆಂದು ಬೀಳ್ಕೊಡುವನು ॥೫॥ ಹರನಾಜ್ಞೆಯಿಂದೆ ಬೀಳ್ಕೊಂಡಿಂದ್ರನಿಳೆಗೈದಿ। ಹರಹರ ಮಹಾರಾಯ ಬುಕ್ಕರಾಯನೆನಿಪ್ಪ। ಧರಣೀಶದಂಶದಿಂದುದಿಸಿ ವಿದ್ಯಾನಗರಿಯಲ್ಲಿ ರಾಜ್ಯವನಾಳುತ॥ ಹರುಷದಿಂ ಪ್ರೌಢದೇವೇಂದ್ರನಿರುತಿರಲತ್ತ। ಪರಮಕೈಲಾಸದಿಂದಿಳೆಗೈದಿ ನೂರೊಂದು

ವರಗಣೇಶ್ವರರು ಬಿಸಿಜಂಗಮಸ್ಥಲವನಂಗೀಕರಿಸಿ ವಿರತರಹರು ॥೬।
ವರಕರಸ್ಥಳದ ವೀರಂಣೊಡೆಯರೆಂಬವರ। ಕರಕಮಲಸಂಜಾತ ನಕ್ಷ
ಸಾಲೆಯ ನಾಗ। ನಿರುತ ಲೊಂದಿನದಲ್ಲಿ ಹಾದರಕೆ ಹೊಕ್ಕು ಮನೆಯ
ವರುಮುತ್ತಿಕೊಳಲು॥ ಪರಮ ಸಮ್ಯಜ್ಞಾನ ತಲೆದೋರೆ ಚಿತ್ತದಿಂ। ಃ
ರತನ ಹೆಸೆಂದು ಸಂಸಾರವಂ ಬಿಟ್ಟಾಗ। ಕರಪೀಠದಲ್ಲಿ ಲಿಂಗವ ತೆಗೆದ
ಕೊಂಡು ಪೀಠವನೊಡನೆ ಕಡಿಗೆಪಾಯ್ಕ ॥೭॥ ಮರುಳನಂದದೆ ತೇ
ಯು ಕೆದರಿ ಬೂದಿಯ ಹೂಸಿ । ವರದಿಗಂಬರನಾಗು ತಾ ಮನೆಯ ಬಾ
ಲಂ। ಹೊರಟು ಬರೆ ಸರ್ವರುಂ ನೋಡುತಿರೆ ತನ್ನ ಗುರು ವಿದ್ದ ಪುರಕ್ಕೆ
ಬರಲು॥ ಪರಿಹಾಸ್ಯಮಂ ಮಾಡು ತಕ್ಕಸಾಲೆಯ ನಾಗ । ನಿರದೆ ಭಿಕ್ಷ
ಬಂದನಿದ ಕೊ ನೋಡೆನಲವರ, ಗುರು ಸೈದೆ ಕಾಣುತ್ತಿ ಬೇನೆಂದು ಕೆ
ಳಲು ಗುರುವಿನೊಡನಿಂತೆಂಬನು ॥೮॥ ಎಲೆಗುರುವೆ ಕೇಳೆಂದು ತನ್ನ
ವೃತ್ತಾಂತವುಂ। ತಿಳುಪಿ ಕೈಯೊಳಗಿರ್ದ ಲಿಂಗವುಂ ತೋರಲದು। ಬ
ದು ಮತ್ತೊಂದು ಪೀಠಕ್ಕದಂ ಮಗುಳಿತ್ತು ಕ್ರಿಯೆಯ ಳಿವಪದಿಯುಂ ತ
ತೊಲಗದೀಯ ಬಿರು ಲಿಂಗವ ಪೀಠದಿಂದಲಂ । ಗಲಘು ಮತಿ ಮಗು
ಬೋಧಿಸಿ ಪಸಾದವನೀಡಿ । ಕಳು ಹಲಲ್ಲಿಂದೈದಿ ಸಕಲದೇಶವ ತಿರು
ಮಗುಳಲ್ಲಿಗೈತರುವನು ॥೯॥ ಬಂದ ಶಿಷ್ಯನನಿಲವನರಿದು ವೀರ
ಣೊಡೆಯ। ರಂದು ಗುರು ವೆಂಬ ಭಾವವ ಸುಳಿದು ಬಳಿಕಲ್ಲಾ। ನಂದದಿಂ
ಶ್ವರ್ವ ಮಾದ್ಯಾದಿ ಸತ್ಕ್ರಿಯೆಗಳಿಂದು ಪಚರಿಸಿ ಭಕ್ತಿಯಿಂದಂ ॥ ಛಂ
ಬಂದೆಸವ ಮನವಂ ಚಿಸು ಪ್ರವೃತ್ತಿ ಗಿ। ತಂದು ಬಿಜಯಂಗೈಸಿ ಪುಷ್ಪಕ
ಪ್ರೋಗನಲ। ವಿಂದವು ರೆಡೆಯಲ್ಲಿ ಮಲರ್ವಿಟ್ಟಲ್ಲಿರ್ದ ನಾರಿಯೊಡಸ
ತೆಂಬನು॥೧೦॥ ತರುಣಿ ಕೇಳೀ ಮಲಕ್ಕೊಳಗಾದೊಡಿಲ್ಲಸುಖ । ವಿ
ರಲಿನಿ ವೊಕ್ಕೊಡೆಯರಲ್ಲದೊಡೆ ವ್ಯಾಕುಲ ಯೋಗ । ಬರಲಿಯೆನು ತುಸು
ತಲಂ ಪ್ರೋಗ ವೀರಂಣೊಡೆಯರೈತಂದು ಕೇಳಿಸಿ ಮ್ಮ॥ ಗುರುಶಿಷ್ಯಸ
ಕಾಣೆ ವೀಮಲಕ್ಕೊಳಗಾದೊ । ಡಿರದಿಯಲ್ಲದೆ ಬರಲಿಯೆಂದು ಸು
ಪೋದನೆನೆ । ಹರಹರಾಯೆಂದೆಲ್ಲವಂ ಬಿಟ್ಟು ಬಳಿಕಾತನಡಿವಿಡಿದ
ನಡೆಗೊಂಬನು॥೧೧॥ ಬರು ತಲ್ಲಿ ಕಾಬನಾ ಮಳೆಗೆ ಕೂದಲು ಸಿಕ್ಕಿ।
ರಮ ಶಿವಯೋಗದಿಂದಿರಲೊಡನೆ ಬೇಗದಿಂ ॥ ಪರಿತಂದು ತಲೆಯ ಕ
ದಲ ಬಿಡಿಸೆ ಕಣ್ದೆರದು ಕಂಡು ಹಾ ವೀರನೀನು ॥ ಪರಿಹರಿಸ ಬಂದೆಯ
ಸಂಸಾರಬಂಧವುಂ। ನಿರುತವೇ ನಡೆಯೆಂದು ತಾ ವೀರ್ವರೊಂದಾಗಿ।
ರುಷದಿಂದಿರದೆ ವಿದ್ಯಾನಗರಿಗೈತರು ವರೆಲೆರಾಮ ಕೇಳೆಂದನು ॥೧೨
ಬಂದಲ್ಲಿ ಹುಟ್ಟರಾವು ತನಮನೆಯಂಗಣದೊ। ಳಂದು ಲಿಂಗಾರ್ಪಿತ

ಭಿಕ್ಷಮಂಬೇಡೆನಲ್। ಎಂದೆಮನೆಯಾಕೆ ಭಸಿತವ ತಂದು ಮುಂದಿರಿಸಿ ತ
ನ್ನ ಕೈಕೊಂಬುದೆನಲು॥ ಸಂದೇಹವಿಲ್ಲದಾಕೆಯ ನಾಗಳಾಮನೆಯ।
ಮುಂದೆ ಸಂಭೋಗಿಸುತ್ತಿರಲವಳ ಗಂಡನೆಂ। ದೆಂಬನಾ ಹುಚ್ಚರಾ ಮೃತ
ನೈದಿ ಬಂದವರ ಕಾಣುತ ತಿಕೋಪದಿಂದಂ॥೧೩॥ ಉಚ್ಚಿದಾಯುಧದಿಂ
ದಟ್ಟೀವರ್ಗರಂತಿರಿಯೆ ತಚ್ಚುಚ್ಚಲಲಗಂ ಕೀಳ್ಘಾಯಂಗಳಿಲ್ಲದಿರ। ಲಚ್ಚ
ರಿಯೆನುತ್ತವಂ ನಡುಗುತಿರೆ ನಾಗಿದೇವಂ ಕಂಡು ಕರುಣದಿಂದಂ॥ ಬೆ
ಚ್ಚಬೇಡೆಲವೋ ನೀನೊಂದು ಭಿಕ್ಷವನಿತ್ತೆ। ಮೆಚ್ಚಿಯಿವಳೊಂದು ಭಿಕ್ಷ
ವನಿತ್ತಳಿವರೊಳಗೆ। ಹೆಚ್ಚುಕುಂದಿಲ್ಲೆಮಗೆ ಸೇನಂಜಲೇತಕೆಲೆಹು
ಚ್ಚನೀಂಕೇಳೆಂಬನು॥೧೪॥ ಹರುಷದಿಂದವನೈದಿ ಪ್ರೌಢದೇವೇಂದ್ರಂಗೆ।
ವಿರಚಿಸಿದೊಡೆಲ್ಲಮಂ ಕೇಳ್ದು ಬೇಗದೊಳವರ। ಕರಸಿ ಭಯಭಕ್ತಿಯಿಂ
ದೆರಗಿ ಗುರುಬಸವೇಶನರಮನೆಗಳೊಳುಹಲಾತ॥ ಪರಮಸಂತೋಷ
ದಿಂ ಲಿಂಗಪೂಜೆಯಮಾಡು। ತಿರೆ ನೋಡುತುಪಕರಣಗಳ ಬಿಸುಟು
ದಂಡಿಗೆಯ। ನಿರದೆ ನೆಲಕಪ್ಪಳಿಸೆ ಗುರುಬಸವನಾ ನಾಗಿದೇವರೊಡ
ನಿಂತೆಂಬನು॥೧೫॥ ಏನಮಾಡಿತ್ತು ಗಂಡುಗನಿಮ್ಮ ನೆನೆ ನಿನ್ನ। ಜಾನ
ಮೆಲ್ಲಿತ್ತು ಲಿಂಗವ ಬಿಟ್ಟು ಬಯಲಸಂ। ಧಾನವಲ್ಲದನರ್ಪಿತಾವಧಾನ
ವನರಿಯೆ ಕೇಳೆನುತ್ತೈಕ್ಯಪದವಂ॥ ಸ್ವಾನುಭಾವದೊಳಿರುಪೆ ಗುರು
ಬಸವದೇವರನು। ಮಾನವಿಲ್ಲದೆ ನಾಗಿದೇವಂಗೆ ನಮಿಸಿಸುಂ। ಮಾನದಿಂ
ಗಾವಿಚಿತ್ರರಕೂಡಿ ತೋಟಕ್ಕೆ ಪೊರಮಡುವರುತ್ಸವದೊಳು॥೧೬॥ ಸಿಂ
ಗಾರತೋಟಕ್ಕೆ ವಿರಕ್ತರೆಲ್ಲರುಂಪೋಗಿ। ತೆಂಗಿನಮರನ ಮೇಗಳೆಳೆನೀ
ರ್ಗಳುಂ ತಮ್ಮ। ಲಿಂಗಕರ್ಪಿತವಾದವೆನುತವಂ ಕುರಿತು ಕೊಳೆ ತೋ
ಟಗಂ ತಂದಿರಿಸಲು॥ ಹಿಂಗದೆಲ್ಲರು ಕುರಿತ ಕಾಯಿಗಳು ಮೊದಲಂತೆ।
ಕಂಗಸವುತಿರ್ದವಾನಾಗಿದೇವರ ಕಾಯ್ಗ। ಳಿಂಗೆನೀರೆಲ್ಲ ಬಯಲಾಗಲ
ದನೋಡಿ ವೀರಣ್ಣೊಡೆಯನಿಂತೆಂಬನು॥೧೭॥ ತಿಳಿದುಕೊಳೆ ನಮ್ಮಂ
ತೆಕ್ರಿಯೆಗಳಿಂ ಶಿವಗಿತ್ತು। ಕೊಳಬೇಕಗಲ್ಲದೊಡೆ ನಾಗಿದೇವರ ತತ
ದೊ। ಳುಳಿದಕ್ರಿಯೆಗಳ ನಿಂತು ನಡೆಯಬೇಕಲ್ಲದೆರಡಕೆ ಜಟ್ಟಕರುವಿ
ನಂತೆ॥ ಕಳವಳಿಸಬೇಡವೆಂದಾ ವಿರಕ್ತರಿಗಾಗ। ತಿಳುಪಿ ಷಟ್ಸ್ಥಲಮಾ
ರ್ಗಮಂ ಕರುಣಿಸಿಂತಿರದೆ। ಬಳಿಕಲಾವೀರ್ವರೆ ಶ್ರೀಗಿರಿಗೆ ಪೋಪರೆಲೆ
ರಾಮೇಶ ಕೇಳೆಂದನು॥೧೮॥ ಗುರುಕರಸ್ಥಲದ ವೀರಣ್ಣೊಡೆಯರೇತ
ನ್ನ। ಪರಶಿಷ್ಯ ನಾಗಿದೇವನ ಕೂಡೆ ನಾವಿನ್ನು। ನಿರವಯವನೈದ
ಬೇಕೆನಲಾಗ ಮೋಹಿನೀಗಜವಿದ್ದ ಬಳಿಗೆ ಪೋಗಿ॥ ಸರವಿಗಳನೆಡೆಗಡೆ
ಗೆ ಕಟ್ಟಿಕೊಂಡುಗಜವ। ನಿರದೇರಿ ಗುರುವೆ ನೋಡೆಂದೊಡಾ ತನ್ನೋ

ದು। ಸರವಿಗೆಳೆಪರಿವರಿಯುಬಂಗಾರವಾಗಿಕಾಣಿಸುತಿಪೆಕೊಕೇಳೆಂದ
ನು ॥೧೯॥ ಎನೆಕೇಳಿನಾಗಿದೇವಂಗುರುವೆನೀವಿನ್ನು ಜನಪನಿಂಪೂ
ಜೆಯುಂಕೈಕೊಳುತ್ತಾಕಲವು। ದಿನವಿದ್ದುಬಹುದೆಂದೊಡಾಗವೀರಂ
ಣೊಡೆಯುರೆಲೆಮಗನೆನಂಬಿದೆನೆನೆ॥ ಅನುಮಾನವೇಕೆನಾನೇಬಂದು
ನಿಮ್ಮಸಾ। ಜನವರಿಯೆನಿರವಯವನೈದಿಸುವೆನೆಂದಾಗ। ವಿನಯದಿಂ
ದವರಬೀಳ್ಕೊಟ್ಟುತಾಂನಿರವಯುವನೈದುವಂಕೇಳೆಂದನು॥೨೦॥ ಇ
ನ್ನಾಲಿಸೈಸಿಗ್ಗದಾಮುವೀರಂಣೊಡೆಯ। ರುನ್ನತದಚಿಂತೆಯಿಂದಲ್ಲಿರ
ದೆಬೇಗದಿಂ। ಮುನ್ನ ತಾನಿರ್ದವಿದ್ಯಾನಗರಿಗೈತರಲುಪೌಢದೇವೇಂ
ದ್ರನರಿದು॥ ತನ್ನಮಗಳಂಕೊಟ್ಟುಕಳುಹಲಾತತ್ವಸಂ। ಪನ್ನನಾನಾ
ಗಿದೇವಂಬರುವತನಕನಾ। ವಿನ್ನಿಲ್ಲಿ ಬಿಟ್ಟಗಲೆವೆಂದುಶಿವಗೋಷ್ಠಿಯಿಂ
ದಿರುತಿರ್ದರುತ್ಸವದೊಳು ॥೨೧॥ ಒಂದುದಿನವಾನೃಪತಿಯೊಡನೆ
ವೀರಂಣೊಡೆಯು। ರೊಂದಾಗಿಪಂಪಾನದೀತೀರಕೈತಂದು। ನಿಂದಿರಲು
ಮಾನ್ಯಲಿಗನೆಂದೆಂಬಪಕ್ಕಿಮಾನಂಕಟ್ಟಿಗಗನಕೊಯ್ದು॥ ತಿಂದಪೆನೆನು
ತ್ತದಂಬಿಡೆಬೀಳುತಿರೆಮುಗುಳೆ। ಬಂದದಂಪಿಡಿಯೆವೀರಂಣೊಡೆಯರ
ದಕಾಣು। ತಂದದಕೆಪೊಟ್ಟೆ ಪಟ್ಟೆಯುಕಡಗಮುಂಹಾಯ್ಕೆ ಹೊಳೆಯುಲ್ಲಿ
ಬೀಳೆಕಂಡು॥೨೨॥ ಪಟ್ಟೆಯುದಕಡಗಮುಂಬಿಸುಟೆಯಾಕೆನಲದಕೆ।
ಪೊಟ್ಟೆಯಾವಲ್ಲಿಯೆನೆಮುತ್ತೊಂದುಕಡಗವನು। ದುಟ್ಟಿಮೊದಲಿಟ್ಟಬಳಿ
ಯುಲಹಾಯ್ಕೆತೋರಿಸಿದೊಡರಸನತಿಚಿಂತೆಯಿಂದಂ॥ ಹೆಟ್ಟನವು
ಕಡಗಂಗಳೆನೆನೃಪತಿನೀನದೇಂ। ಸುಟ್ಟನೇಟೊಕ್ಕಸದೊಳವತರಿಸಿ
ನೋಡೆಂದೊ। ಡ್ಕಟ್ಟರಿಯೆನುತ್ತಾಗನೋಡಲಾಕಡಗಂಗಳಿರೆನೃಪತಿಬೆ
ರಗಪ್ಪುತು ॥೨೩॥ ಚೆನ್ನಾಗಿಚಂದ್ರಗಾವಿಯುಟ್ಟುದವಮಾಡಿ। ತನ್ನ
ಗುರುವಿಂಗೊಂದುಹೊಳೆನರಸಿಂಗೊಂದು। ಸನ್ನಿಯುಂಕೊಡೆಕರಸ್ತ
ಲದವೀರಂಣೊಡೆಯುರರಸಿಯುದನುಟ್ಟುಕೊಂಡು॥ ತನ್ನಪಿತನರಮ
ನೆಗೆಬರಲರಸನೋಡುತಾ। ಹೊನ್ನನಂಚದಸಿದೆಲ್ಲಿಯುದೆಂದುಕೇಳೆ।
ಲವ। ನೆನ್ನದೇವರಿಗೊಂದರಾಯುದಿಂ ಗೊಂದನಾಂಕೊಟ್ಟೆನೆನ ೦
ತೆಂಬನು ॥೨೪॥ ನನ್ನೊಡವೆಯುಂನಿನ್ನದೇವರಿಗದೆಂತಿತ್ತೆ। ಚೆನ್ನಾಗಿ
ತಿಳುಪೆಂದೊಡೆಭೂಮಿಪತಿಕೇಳ್ವ। ದೆನ್ನದೇವರದನವಧಿಗಳೂ
ಟ್ಟನಲ್ಲನಾಂಪೆರರೊಡವೆಯುಂಕೊಡುವನೆ॥ ನಿಂನೊಡವೆನಿನ್ನಬೊ
ಕ್ಕಸದಪೆಟ್ಟಿಗಯುಲಿದೆ। ನನ್ನಿಯೆನೆಪೆಟ್ಟಿಗೆಯುತರಿಸಿನೋಡಿದೊಡರ
ಲು। ಹೊನ್ನಯ್ಯನೀನಸಗನಲ್ಲವೆನಲ ವನರಿದನೆನುತೆನಿರವಯು
ಮುಪ್ಪನು ॥೨೫॥ ಮಡಿಬಿಲ್ಲಶಾಂತದೇವರೆತನ್ನಲಿಂಗಮುಂ। ತೊಡ

ಚಿಸಂಘಾನದಿಂದಿನೋಳ್ಪವರನೆಲ್ಲರಂ । ಪಿಡಿಯುಪ್ಪೋಗೆತ್ತಿವೆಂಜುಟ್ಟಿ
ನೆಂದಿರದೋಡುತಿರಲಾಗಳೊಂದುದಿವಸಂ॥ ಕಡುವೇಗದಿಂಕರಸ್ಥಲ
ದವೀರಂಣೊಡೆಯರೆಡೆಗೆಬಂದೆಸವುತಿರೆಸಂಘಾನವಾಯ್ತೆನ್ನು । ಬಿ
ಡದೆಸೆವುದೆನಲಾತನೆಸೆದು ಬಳಿಕಾಲಿಂಗದೊಡನೆ ನಿರವಯುವುಪ್ಪೆ
ನು ॥೨೬॥ ಪೇಳಲಿಂನೇಂಸಿದ್ಧರಾವುಹೇಟಿಯುವುರುಳ್। ಕೋಳಿಗ
ಳಮೇಲಿನನ್ನಯುಹೇಟಿಯುಂಬಿಟ್ಟ। ಕಾಳಗದಿನೆಲ್ಲವೆಂಗೆದ್ದುಕೊಂಡಿ
ರದೆತಾನೊಯ್ಯುತಿರಲೊಂದುದಿವಸಂ॥ಆಳೋಚನಂಗೈದು ತನ್ನೊ
ಳಗೆಚಿಂತೆಯುಂ ತಾಳಿವೀರಂಣೊಡೆಯರ್ಕೈತಂದುನೋಡಲಾ। ಕೋ
ಳಿಗಳನೆಲ್ಲವಂನಿರವಯುವನ್ಯೆದಿಸಲುಕಂಡೆನೆನೆಬಯಲಪ್ಪನು॥೨೭॥
ತಗರಕಾಳಗದಪಬುವಾತೆರದೊಳ್ಕೈದುವಂ । ಮಿಗೆಗೆಲ್ಲಗೂಳಿಯುಂ
ಗಡಿಯುಕಜ್ಜಾಯುಗಳ । ತೆಗೆತೆಗೆದುಮೆಲ್ಲುತಿರಲಿರದವರುಕೊಲ್ಲ
ತಿರೆಯಿಾಪರಿಯೊಳೊಂದುದಿವಸಂ ॥ ವರಗರಸ್ಥಲದವೀರಂಣೊಡೆಯ
ರಾಗಳ್ಕೈತರುತಾತನಂಕಂಡುಕೊಲ್ಲಬೇಡೀತನೇ। ಪರಮಶಿವಯೋ
ಗಿಯೆನಲರಿದನೆಂದೆನುತಾಗಲಿರದೆನಿರವಯುವಪ್ಪನು ॥೨೮॥ ಬಾಲ
ಲಿಂಗಣ್ಣನೊಲವಿಂದೆವೀರಂಣೊಡೆಯ । ರಾಲಯುಕೆಬಂದುಬಿಕ್ಷವಬೇ
ಡಿಕಾಣುತಿವ । ಬಾಲನೆಂದೊಳಯಿಕ್ಕೆಕರೆಯುಲ್ಕೆತಂದು ಮಂಚದ
ಮೇಲೆಪವಡಿಸಿರಲು ॥ ಲೀಲೆಯಿಂದಾತನಂಗೈಯ್ಯಲಿಂಗವತೆಗೆದು।
ಮೇಲೆತಾವೆಲ್ಲರುಂಸವಿಸಿಬಳಿಕಾಗಲಾ । ಬಾಲಲಿಂಗಣ್ಣನಂಕರೆಯೆನ
ಲುಕರೆಯೆಪರಣವನುಳಿದುಡಿಂಬವಿರಲು ॥೨೯॥ ಕಂಡಾಗಲಾವಿತ
ಕ್ತರನೆಲ್ಲರಂಕೂಡಿ। ಕೊಂಡುವೀರಂಣೊಡೆಯರೇತಾವುಪೊದಲೆತೆ।
ಕೊಂಡಲಿಂಗವನಾತನಂಗೈಯೊಳ್ಇರಿಸೆ ಕಣ್ದೆರೆಯೆಲಾಲಿಂಗಣ್ಣನು॥
ಉಂಡುಪಿಲ್ಲೇಳೆಂದೊಡಾನುನಿಂಮೊಡನಾಗ। ಳುಂಡೆನೆನೆಕೇಳ್ದುವೀ
ರಂಣೊಡೆಯರೆಂತುನೀ । ನುಂಡೆಯೆನೆಬಾಲಲಿಂಗಂಣನವರುಂಡೂ
ಟಗಳಕುರುಪುಗಳಪೇಳ್ದನು ॥೩೦॥ ಆನುಡಿಯುಕೇಳ್ದುವೀರಂಣೊ
ಡೆಯರಧಿಕಸುಂ। ಮಾನಟಂದಾಗಲೀತಂಪ್ರಾಣಲಿಂಗಸಂ। ಧಾನನೀ
ನಕುದೆಂದುಬಾಲಲಿಂಗಂಣನಂ ಪಿಡಿದೆತ್ತಿಕೊಂಡುಕೂಡೆ॥ಸ್ವಾನುಭಾ
ವದೊಳೊಲಿದುಕೊಂಡಾಡುತಿರಲದಂ। ತಾನರಿದುನಾಗಿದೇವಂಬಳಿ
ಕ್ಕವರನನು । ಮಾನವಿಲ್ಲದೆನೋಡಿನಿರವಯುವನ್ಯೆದಸುವೆನೆಲರಾ
ಮಕೇಳೆಂದನು ॥೩೧॥ ಸರವಿಯುಂತನ್ನಕಾಲಂಸುತ್ತಿಕೊಂಡುಬಳಿ।
ಕರಲದಕೆಲಿಂಗವುಂಕಟ್ಟಿಕೊಂಡೆಡೆಯಾಡು। ತಿರುತೊಂದುದಿನದಲ್ಲಿ
ಮಲಗಿಕೊಂಡಿರೆಪ್ರೌಢರಾಯನದಕಂಡುತೆಗಸೆ॥ಹರಣವಿಲ್ಲದೆಡಿಂ

ಬವಿರೆನೋಡಿಭೂಪನಾ। ಸುರವಿಗಾಲಿಂಗವಂಕಟ್ಟಿಸಲುಕಂಡೆರವು।
ತೆರಬಾರದಿವನರಿದನೆನುತ್ತೆನಿರವಯವುಪ್ಪನೆಲೆರಾಮುಳಕ-ಳೆಂದನ್ನ
॥೨೦॥ ಬತ್ತಲೇಶ್ವರನೆಂಬಶಿವಯೋಗಿಗುಹೆಯಲ್ಲಿ। ಬತ್ತಿದಶರೀರದಿಂ
ದಿರೆಸ್ಸ್ಪತಿನೋಡುತ್ತ। ವೃತ್ತಕುಚೆನೀನೀತನಸಂತೋಷಿಸಲಾಪೆಯಾ
ಯೆಂದೊಡಾಪದ್ಮಾವತಿ॥ ಚಿತ್ತೈಸುಜೀಯನಾನೀತನಿಂಪುತ್ರನಂ।
ಪೆತ್ತುನಿನ್ನಯಬಳಿಗೆಕರತರುವೆನೆಂದೊಡನೆ। ಬಿತ್ತರದೊಳುಯ
ತಿಯನೊಲಿಸಿಕೊಂಡೊರ್ವಮಗನಂಪಡೆವಳುತ್ಸವದೊಳು ॥೨೨॥
ಇರುತಲೊಂದಿನವಿರೂಪಾಕ್ಷಲಿಂಗನತೀರ। ಪರುಸೆಂನಾಗಳಾಪ
ದ್ಮಾವತೀತನ್ನ। ಪುರುಷನಂಕೂಡಿಕೊಂಡೈತಂದುಮಗನನಾತನಕೈ
ಗೆಕೊಟ್ಟಬಳಿಕ॥ ಧರಣಪತಿನೋಡೀತಬತ್ತಲೇಶ್ವರನೆಂದು। ಕರವೆತ್ತಿ
ತೋರಿವರರಿದರಿಲ್ಲಿಂತುನಾ। ಏರಬಾರದೆನುತಲಾಶಿಶುವ ಮೇಲ
ಕಪಾಯ್ಕ್ತಾನೊಡನೆಬಯಲಪ್ಪನು ॥೨೪॥ ಪರಮಗುರುಬಸವೇ
ಶನಧಿಕತರವಾದದಿಂ। ನಿರದೆಶಾರದೆಯಪೀಠವನೇರಿಗೆಲವಿನಿಂ। ಮು
ರಳಿಬಂದಾ ಪ್ರೌಢನರಮನೆಯೊಳಿರಲೊರ್ವ ಯೋಗಿಖೇಚರಗ
ಮನದಿಂ॥ ಇರಲರಸನತಿಚೋದ್ಯದಿಂನೋಡುತಿರಲರಿದು। ಗುರುಬ
ಸವನಸವನಿಗಿಂಮೇಲಕ್ಕೆಪೋಗಿಖೇಚರದಲ್ಲಿಸಕಲರಾಗಂಗಳಂಪಾಡಿ
ಬಳಿಕಿರದೆನಿರವಯವಪ್ಪನು ॥೨೫॥ ಆಸಿನ್ನೆಲಸಿದ್ಧರಾಮೇಶನಿ
ರ್ವಾಣ। ಚೋಳೇಶನತಿಪವಾಡಂಗಳಂಮೆರವುತಿರು। ತಾಲದಮರ
ದಬಿಳಲಪಿಡಿಕೊಂಡುಶಿವಯೋಗನಿಜಸಮಾಧಿಯಲಿನಿಂದು ॥ ಲೀಲೆ
ಯಿಂದಿರಲಾಗಲಲ್ಲಿಪೆರ್ಭಕ್ತದನ। ಜಾಲವಾತಂತ್ರಿದರ್ನೆಂದು ತ್ರೀ
ಯಲ್ಕಿರದೆ। ಪೇಳಲೇನವರಕ್ಕೆಯೊಳಗೆನಿರವಯವುಪ್ಪನೆಲ್ಲರುಂ
ಚೋದ್ಯಮನಲು ॥೨೬॥ ಮರುಳೆನಂದದೆಮುಕ್ಕಳೊಡನೆಪರಪಟ್ಟ
ತಾ। ನಿರದಾಡುತಿರಲರಸನೈತರುತನೋಡೀತ। ಪರಮಶಿವಯೋ
ಗಿಯಹನೆಂದುನಿಶ್ಚೈಸಿಕರೆಯೆಂದೊಡಿವನರಿವನೆನುತ॥ ಇರದಾಗಬ
ಯಲಪ್ಪನಾತನೆಂದಲಾಗಿಪವ। ಪರಿಯಲತಿಮರುಳರಂದದೊಳಿಪ್ಪ
ನೂರೊಂದು। ವಿರತರೆಲ್ಲರುನಿರಾಕಾರವಂತಳೆವರೆಲೆರಾಮೇಶಕೇ
ಳೆಂದನು॥೨೭॥ ಎಲೆರಾಮಕೇಳಿನ್ನುಸಕಲಾಗಮಂಗಳಿಗೆ। ನೆಲೆಯೆ
ನಿಸಿಪ್ರೌಢನಿಂಪೂಜೆಯಂಕೊಂಡುಷಟ್ಸ್ಥಲಮಾರ್ಗಮಂಸಕಲಶಿ
ವಭಕ್ತಸಂತತಿಗೆಕರತಳಾಮಳಕವಾಗಿ॥ ತಿಳುಪ್ಪಲನುಭವಸೂತ್ರ
ಮಾದಿಶಾಸ್ತ್ರಂಗಳಂ। ಗೆಲವಿನಿಂಪೇಳ್ದುನಿಜಶಿವಸಮಾಧಿಯಲಿಮಿಗೆ।
ನಲವಿನಿಂದಲ್ಲಿನುಗ್ಗೆಯ ಮಾಯಿದೇವಪಬುವ ರನಿರದೆಮುಕ್ತವಪ

ಸು॥೩೮॥ ಎಲೆರಾಮ ಕೇಳ್ವುದಾ ಪ್ರೌಢದೇವೇಂದ್ರನಿರು। ತಳಿವನವ
ನಶದಂವಿರೂಪಾಕ್ಷರಾಯನಂ। ದಿಳೆಯನಾಳುತ್ತಮಿರಲವನನೆಬ್ಬಟ್ಟಿ
ಸಲಸಣರಾಯನಾನಗರಿಯಂ॥ ಗೆಲವಿನಿಂತೆಗೆದುಕೊಳಲವನಸುತನಾ
ಗಭೀ। ತಳವನೊಲಿದಾಳ್ವನೈವತ್ತೊಂದುವರುಷಮುದ। ತಿಳಿವುದಾ
ಪಟ್ಟಿಕಚ್ಯುತನೆಕಡೆಪಳಿಕಲವರಳಿಯಂದಿರೊಳಿಗಾಳ್ವರು ॥೩೯॥
ಆಸಾಪ್ರೌಢರಾಯಂಪೋದಕೆಲದಿನದ। ಮೇಲಿರದನಾಚಾರವೇ
ಪೆಚ್ಚಿಧರೆಯೊಳಗೆ। ಮೇಲಾಗವೀರಶೈವಾಚಾರವಡಗಿಪರವಾದಿಗಳೆ
ಘನವಾಗಲು॥ ಕೈಲಾಸಕ್ಕೆದಿನಾರದನಾಗಪರಮೇಶ। ನೋಲಗಂ
ಗೊಟ್ಟಿಪ್ಪಸಮಯದೊಳುಕಂಡುಸ। ಲ್ಲೀಲೆಯಿಂದೆರಗಿಮುಗುಳೆದ್ದು
ಬಿನ್ನವಿಸುವೆಂಭಯಭರಿತಭಕ್ತಿಯಿಂದಂ ॥೪೦॥ ಪುರಾರಿಚಿತ್ತೈಸು
ಪಿಂತೆಧರೆಯೊಳಗನಾ। ಚಾರಮೇಪೆಚ್ಚಿತ್ತೆನೆಸಂದುಪೋದಲಾದಂ। ವೀ
ರಶೈವಾಚಾರವಂಪ್ರತಿಷ್ಠಿಪುದೆಂದುಕಳುಹಿರಿಕೊಡೆನೀವು॥ ಬರಂ
ತೆರಾಕ್ಷಸಶ್ವೇತಾಂಬರಂಗದೇ। ಳ್ನೂರುಮೆಪ್ಪತ್ತುವರುಷಮುಮ
ಪನವಸಂತತಿಯ। ಧಾರುಣಿಯನಾಳಿಂದುಕಳುಹಿದರಿಕಳುಹಲಾಬ
ಸವಾದಿಶರಣರೆಲ್ಲ॥೪೧॥ ಹರನೆಚಿತ್ತೈಪುದೇಳ್ನೂರುಮೇಲೆಪ್ಪತ್ತು।
ವರುಷಪರಿಯಂತರಂಬರಲೊಲ್ಲೆವೆಂದವರು। ನಿರವಯವನೈದಿದರು
ಧರೆಯೊಳಗವೊದಲಂತನಾಚಾರಪೇಪೆಚ್ಚಲು॥ ಸುರಪನನಿಮಿತ್ತದಿಂ
ಬಿಳೆಯೊಳಗನೂರೊಂದು। ವರಗಣೇಶ್ವರರುಬಸಿಜಂಗಮಸ್ಥಲವಾಂ
ತು। ಪರಮಷಟ್ಸ್ಥಲವನುದ್ಧರಿಸಿಬಳಿಕವರಿರದೆನಿರವಯವನೈದಲೀ
ಗ ॥೪೨॥ ಧರೆಯೊಳಗೆವೀರಶೈವಾಚಾರವಡಗಿತ್ತು। ಕರುಣದಿಂನೀ
ಪೆಚಿತ್ತೈಸಿಷಟ್ಸ್ಥಲವನು। ದ್ಧರಿಸೆಂದುನಾರದಂಬಿನ್ನವಿಸಲೀಗಂನಿ
ರಂಜನಗಣೇಶನೊಡನೆ. ವರಗಣೇಶ್ವರರನೇಳ್ನೂರ್ವರಂಕೊಡಿಕೊಂ।
ಡಿರದೆಭೂಮಿಯೊಳುದಿಸಿಜಂಗಮಸ್ಥಲವಾಂತು। ಪರಮಷಟ್ಸ್ಥಲವ
ನುದ್ಧರಿಸೆಂದುಕಳುಹಲವರೊಡಗೂಡಿಭೂಮಿಗಿಳಿದು ॥೪೩॥ ಪರ
ಮಗೋಸಲಚನ್ನಬಸವೇಶ್ವರನನುಸ್ಮ। ಸರಸಿರುಹದಿಂದಾನಿರಂಜ
ನಗಣೇಶ್ವರಂ। ಹರುಷದಿಂದೊಗೆದುಸಿದ್ಧೇಶನಾಮವನಾಂತುಕಗ್ಗೆರೆ
ಯತೋಟಕ್ಕೈದಿ॥ ಇರೆನಂಬಿಯಣ್ಣನೆಂಬಾತನತಿಭಕ್ತಿಯಿಂ। ಶರಣೆಂ
ದುಭಿಕ್ಷಕ್ಕೆಬಿನ್ನವಿಸಿಕೊಂಡೀಗ। ಅರುಗಿಎಂದಾನೆಕರಕೊಂಡುಪೋ
ದಪೆನೆಂದುಕಗ್ಗೆರೆಗೆಪೋಗಲಾಗ॥೪೪॥ ಬಗಳೆದಿಂದೂರೊಡದುಪೋಗಿಕೆ
ಲಪಿಪಸಕ್ತೆ। ಮುಗುಳೆಬಪ್ಪನ್ನೆಗಂತೋಂಟದೊಳಗೇನುಮಂ। ಬಗೆಯ
ದೆಶಿವಧ್ಯಾನದಿಂದೆಪರವಾಶವನೈದಿರೆಗೆಡಲೆಹುತ್ತವಿಕ್ಕೆ ॥ ಜಗವೆಲ್ಲವ

ತ್ರಿಚೋದ್ಯದಿಂ ನೋಡಿಸುತ್ತಮುಂ। ಬಗೆದು ಕಂಡ ಗತೋಂಟದಸಿದ್ಧ
ಲಿಂಗನೆಂ। ಗಣಿತಮಹಾಪುರುಷನೆಂಗು ಪೂಜಿಸುವರೆಲೆಸಿದ್ಧರಾಮೇ
ಶಕೇಳೆಂದನು ॥೪೫॥ ಅಲ್ಲಲ್ಲಿ ನಾನಾಪವಾಡಮಂ ಮೆರವುತಿರೆ। ಇಲ್ಲಿಲ್ಲಿ
ಗಣನಾಥರು ದಿಸಿಚರರೂಪಿಸಿಂ। ದಲ್ಲಲ್ಲಿ ಪೂಜೆಗೊಳುತ್ತೈದಿ ತೋಂಟ
ದಯತಿಯು ಸಾರಲತಿಪೀತಿಯಿಂಗಂ॥ ಮೆಲ್ಲಮೆಲ್ಲನೆ ತೋಂಟದಾರ್ಯ
ನಾವಿರತರೊಳು। ಬಲ್ಲಬಲ್ಲರೊಳು ತತ್ವಾನುಭಾವಂಗಳಿಂ। ಸೊಲ್ಲ
ಸೊಲ್ಲಿಗೆಪರವು ಷಟ್ಸ್ಥಲವನುಸುರೂರಾವಿರತರಾರಾರೆಂದೆನೆ॥೪೬॥
ಸಿದ್ಧಲಿಂಗೇಶ್ವರಂ ಕಂಬಳಿಯುದೇವರಾ। ಸಿದ್ಧನಂಜೇಶ್ವರಂ ಚನ್ನದೇ
ವರು ದೊಡ್ಡ। ಸಿದ್ಧಲಿಂಗೇಶ್ವರಂ ಕಂಕಣದದೇವರಾಂ ಲಂಬಕರ್ಣದದೇ
ವರು॥ ಸಿದ್ಧಮಲ್ಲೇಶ್ವರಂ ಗುಮ್ಮಳಾಪುರವರದ। ಸಿದ್ಧಲಿಂಗೇಶ್ವರಂ ಯೆಡ
ತೊರೆಯಪುರದಗುರು। ಸಿದ್ಧವೀರಂ ಹೊಡೆಯರಸವಘನಲಿಂಗದೇ
ವರು ಚಿಕ್ಕಮಲ್ಲೇಶನು ॥೪೭॥ ಮರುಳಸಿದ್ಧೇಶ್ವರಂ ಚಂದ್ರಶೇಖರನೆ
ಸವ। ಸುರಗಿಯಾರ್ಯಂ ಶಾಂತಮಲ್ಲಿಕಾರ್ಜುನದೇವ। ರಿಂದೆಬೆಡ
ಗಿನಪರ್ವತೇಶ್ವರಂ ಪಟ್ಟಣದದೇವರಂ ದಾಜಗುನಿಯ॥ ಮರುಳದೇ
ವರು ಮುಳಿಯದೇವರಂ ಬತ್ತಲೆಯ। ಶಿರುವದೇವರು ಸಂಪಗೆಯ ದಾ
ಚವಟ್ಟಿದೇ। ವರು ಸಪ್ಪಿಯಾರ್ಯನುಪ್ಪಿನಹಳ್ಳಿಯಾರ್ಯ ಸೊಪ್ಪುವ
ಶೀಲವಂತಾರ್ಯನು ॥೪೮॥ ಎಸವಕೊಡಗಿಯ ಹಳ್ಳಿಯಾರ್ಯನಾ ಜೋಲಿ
ಯಾ। ಬಸವೇಶ್ವರಂ ರಾಚವಟ್ಟಿಕೋರಿಯ ಸಿದ್ಧ। ಬಸವೇಶ್ವರಂ ಹಿರ
ಣ್ಯಾರ್ಯನಾ ಶಿವಪೂಜೆಯಾರ್ಯನೆಂದೆನಿಪ ಜೋಳ॥ ಬಸವೇಶನಂ
ದು ಕಿತ್ತೂರಬನಿಂದುರಾ। ಜಿಸುವ ಚನ್ನಮಲ್ಲೇಶ್ವರಾದಿ ಪರಿಪರಿ
ಯಲ್ಲಿ। ಪೆಸರೊಡೆದವಿರತರೇಳ್ನೂರ್ವರಾ ತೋಂಟದಯತೀಶನಂ
ಕೂಡಿರ್ಪರು॥೪೯॥ ಇಂತಿವರು ಮೊದಲಾದವಿರತರೇಳ್ನೂರ್ವರುಂ। ಸಂ
ತತಂಗೂಡಿ ಷಟ್ಸ್ಥಲಮಾರ್ಗಮಂ ಧರೆಯೊ। ಳಂತರಿಸದಂತೆ ನೆಲೆಗೊ
ಳಿಸುತ್ತೆ ಪೂಜೆಗೊಳುತಿರದೆ ನಿಜಮುಕ್ತರಹರು॥ ಸಂತಸದಿ ಹುಚ್ಚನಂ
ಜೇಶ್ವರಂ ಬಳಿಕವರ। ಪಿಂತೆ ಬಲುಹುಚ್ಚವಿರೂಪಾಕ್ಷಸಿರಿಗಿರಿ। ಪತ್ರಾಂತ
ದೊಳಗಿರ್ಪಮೋಹನಿಯಗಜಮಂ ಪತ್ತಿ ನೋಡೆ ನಿರವಯಮಪ್ಪರು॥
ಮಹಾದಾಪುರದ ಮರುಳದೇವರೆಂಬವರಧಿಕ। ಮಾದಬಂ ಸತ್ತಪರಣಂಗ
ಳಂ ಪಡೆದುಸ। ನ್ಮೋದದಿಂ ಬಿತ್ತಿದರು ದಿಂಗಳಿಗೆ ತೆಂಗು ಮೊದಲಾದಫ
ಲಗಳನೆಪಡೆವರ॥ ಮೇದಿನಿಗೆ ಪೊಸತೆನಿಸಿ ಹೊನ್ನವಳ್ಳಿಯ ಲಿರುತನಾ
ದಿ ಸಿದ್ಧರದೇವಸಿದ್ಧವೀರೇಶಂ ವಿ। ನೋದದಿಂ ನಾನಾಪವಾಡಂಗಳಂ
ಮೆರದು ಬಳಿಕ ನಿಜಮುಕ್ತರಹರು॥೫೧॥ ನಿಡುಮಾಮುಡಿಯ ಕರಿಯ

ಬಸವೇಶನೈತರುತ । ನುಡಿದುತೆಂಗಿನಮರನಭಿಕ್ಷಮಂಬೇಡಲ್ತಿ॥
ಕಡುಬಾಗಿನಿಂದುಫಲಗಳನೀಡಿ ಬಳಿಕಲಾಮರನುಮೊದಲಂತೆಸೆವು
ದು॥ ಬಿಡದೆಸುವ್ರತದಕರಡೆಯುಹಾಲದೇವರಂ। ದೊಡನೆಸರವಯು
ಸಿದ್ಧರಾಮೇಶನಾದಿಯಾ । ದೊಡೆಯರುಗಳುಬಸಿನಾನಾಷವಾಡಂ
ಗಳಂಮರೆದುನಿಜಮುಕ್ತರಹರು ॥೪೨॥ ಮೀರಸ್ಸೈವಾಚಾರಷಟ್ಥ್ಯ
ಲಬ್ರಹ್ಮಸ। ಚಾರುಚರಮೂರ್ತಿಯತಿಕುಲತಿಲಕನೆಂದೆನಿಪ।ಕೋ
ರಾನ್ನದಾರ್ಯ ನಡೆವಿಡದೆಘನಚರಕೆವ್ಯಪ್ಪನ್ನಮಂನೀಡಿಸುವನು॥
ಧಾರುಣಿಯೊಳೆಸೆವುತಿಹಬುಕ್ಕಸಾಗರದಘನ, ಚಾರಿತ್ರಮಹಿಮನಾ
ಕರೆಯುಸಿದ್ಧೇಶ್ವರಂ । ವಾರಿಯಿಂಬಂದಜಂಗಮಕೆ ವ್ಯಪ್ಪನ್ನಮಂ
ನೀಡಿಸುವಮುದದೊಳು ॥೪೩॥ ನಾರಕಂಥೆಯದೇವರೆಸವಚೆಂಗ
ಡಹಳ್ಳಿ। ವೀರಪ್ಪನಲ್ಲಿಮಾವಿನಹಳ್ಳಿಮಲ್ಲಪ್ಪ । ನೋರಂತೆಗಾಮುದಾ
ಸಂಗಮೇಶಂಗುಮ್ಮಳಾಪುರದೊಳಿಹಜಂಗುಳಿ॥ ವೀರಪ್ಪನುಂಪ್ರಸಾ
ದಿದೇವರಮುಖ್ಯ । ಚಾರುಚರಮೂರ್ತಿಗಳಬಂದಜಂಗಮಕಿರದೆ।
ವಾರಿಯಿಂದಾಸೋಹಮಮ್ಮಳ್ಪರೆಸಿದ್ಧರಾಮೇಶಕೇಳೆಂದನು॥
ಪರಮಜಂಗಮಕಿನ್ನುದಾಸೋಹಮಂಮಾಳ್ಪ। ಧೊರೆಗಳಂಪೇಳ್ವೆ
ನಾನಂಜರಾಯಂಮುಂದೆ । ನಿರುತದಿಂಕೆಂಚಸೋಮಂಣನಾಯಕ
ಯುಳಂದೂರರಸುಚನ್ನೊಡೆಯರು ॥ ಬರಗಿಯಾದೇವಿನಾಯಕನು
ಬುಕ್ಕಂಣೊಡೆಯ। ನಿರದಲ್ಲಿಸಿದ್ಧಮಲಿನಾಯಕಂಮತ್ತೆಶಿವ। ಶರಣ
ನಾಸಂಕಂಣನಾಯಕಂಜಂಬೂರದಾನಿಪಾಸದಧೊರೆಗಳು॥೪೪॥ ಕೇ
ತಸಾಗರದಚಿಕ್ಕಣ್ಣಸೆಟ್ಟಿಯಲ್ಲಿವಿ। ಖ್ಯಾತಿಬಿಜ್ಜಾವರದಪಬುಮೆಚಿಕ್ಕ
ಣಗೌಡ । ಸಾತಿಶಯದಿಂದೆಸುಕುಟೂರತಮ್ಮಂಣಗೌಡನೆಸೆವತ
ಗಡೂರಪಬುವು॥ ಪ್ರೀತಿಯಿಂತಳಕಾಡಚಂದ್ರಶೇಖರನುರವ । ದಾ
ತನಾಭೋಗವಾಡಿಯಲಿಂಗರಾಯನೆತಿ। ಭೂತಹಿತನುಡುವಂಕನಾ
ಡಪಬುಮೊದಲಾಗಿದಾಸೋಹಮಂಮಾಳ್ಪರು ॥೪೫॥ ಜಂಗಮಕೆ
ಬಿಡದೆದಾಸೋಹಮಂಮಾಳ್ಪನಿಜ। ಲಿಂಗೈಕ್ಯನೆಸವಸೋಲೂರಬ
ಸವಪ್ಪನಾ।ಸಂಗಯ್ಯ ಸುಮ್ಮಹಂತಯ್ಯನುಂಸುಂಡಿಗೆಯ ಸಿದ್ಧಪ್ಪನಿ
ರದೆಮುದ್ದುಗಂಗಪ್ಪನಂದೂರಕೆರೆಯದಾಸೋಹವಾ। ಲಿಂಗಪ್ಪನಲ್ಲಿ
ಮಲ್ಲಪ್ಪನಾಕಾಬಣದ।ಬಿಂಗಿಗಂಗಾಧರಂಕಳಲಿಯಾವೀರಪ್ಪನೆಸೆವ
ಧೂಳಿಭಕ್ತನು॥೪೬॥ಪೊಸಹಳ್ಳಿಯಲ್ಲಿನಾಗಪ್ಪನುಂನರೆದಾತ।ಬಸವ
ಪ್ಪನುಮ್ಮೋಳಿಗಯ್ಯನುಂಬಿಡದೆರಾ।ಜಸುವಚಾಣಾವರದಸಿದ್ಧಪ್ಪ
ನುಂಶೀಲವಂತಸಿರಿಯಾಳಯ್ಯನು ॥ ಜಸುವಡದಹೊಳಿನಾಸಿದ್ಧಪ್ಪ

ನುಂ ಮತ್ತೆ, ಹೊಸತೆನಿಪ ದುರ್ಗದಾಕಲ್ಲಪ್ಪನುಂ ವಿರತ, ಬಸವಪ್ಪನುಂ
ತ್ರೈಲದಲ್ಲಿ ಮರುಳಪ್ಪನುಂ ಮಾಸಂಗಿ ಶಿಖರಪ್ಪನು ॥೫೮॥ ಬಿಟ್ಟಮಂಡೆ
ಯುಮೆಂಬುವರಂ ಬಯಲುಮೆಂಬುವರಂ । ನೆಟ್ಟನಾ ಕಳ್ಳಲಿಯಾ ಕಂಚಿದೇವ
ಮರ್ಹಾ। ದಿಟ್ಟಕಾನಾಪುರದ ಮರುಳಸಿದ್ಧೇಶನುಪ್ಪಲಗುಡಿಯ ಸಂ
ಗಮೇಶಂ॥ ಕೊಟ್ಟೂರ ಬಸವಲಿಂಗೇಶನಾನೆಯಗೊಂದಿ, ಬೆಟ್ಟದಲ್ಲಿ ಹು
ಚ್ಚದೇವರಾ ಬೆಳುಗಾವಿ। ಪಟಣದೊಳಿಹ ಹುಚ್ಚಸಿದ್ಧರಾಮೇಶನಿರವ
ಧಿಕಮಹಿಮೆಯ ಪುರುಷರು॥೫೯॥ ನರಸಿಂಹನಂಶದಳಿಯುರು ಮೂವ
ರುಂ ಪೋಗಿ। ತುರುಕರೊಳು ಕಾದಿ ಮಡಿಯಲ್ಕೆ ಪಿರಿಯವನತಲ್। ನಿ
ರುತವಿಂ ಕಾಸಿಯೊಳು ಪೂಜೆಗೊಂಬುದು ಬಳಿಕ್ಕುಳಿದವನೆತ್ತಮ್ಮ ಪು
ರದಿ॥ ಇರದೋಡಿ ಪೋಗಲಾ ಪಟ್ಟಣಕೆ ಬೇಗದಿಂ। ತುರುಕರ್ಕೈತಂದು
ನೆರೆಗಳಪಿಡಿದು ಸೂರಾಡಿ। ಭರದಿಂದೆ ಸಕಲರಂ ಸಂಹರಿಪರೆಲೆ ಸಿದ್ಧರಾ
ಮೇಶ ಕೇಳೆಂದನು ॥೬೦॥ ಎಲೆ ಸಿದ್ಧರಾಮೇಶ ಕೇಳಿಂನು ಹಂಪೆಯಾ।
ನೆಲನೆಲೆಯ ಗೋಪುರವನಳಿದು ಮಾತಂಗದಿಂ । ದಳುಕದಾ ವೀರೇಶ
ನಂ ಕಿತ್ತು ವಿಷ್ಣುಮೊದಲಾದ ಪತಿಮೆಗಳನೊಡೆದು ॥ ಬಳಿಕಲ್ಲಿ ಸಕಲ
ಮಂ ಸಂಹರಿಸಿ ಕೆಲದಿನಂ । ಕಳೆದು ಬಳಿಕಲ್ಲಿಂದೆ ಸಂತಸದಿ ತಂತಂಮ್ಮ।
ನೆಲೆಗಳಿಗೆ ಪೋಗಲಾ ಪಟ್ಟಣದ ರಾಜ್ಯದೊಳಗೇನೆಂಬೆ ನದ್ಭುತವ
ನು॥೬೧॥ ಪಟ್ಟಣಂ ಕೆಟ್ಟು ತದ್ರಾಜ್ಯದೊಳಗೆಲ್ಲಿಯುಂ । ಹಟ್ಟಿಕೊಟ್ಟ
ಗಳಾಗಿ ದೇಶದೊಳಗಲ್ಲಲ್ಲಿ । ಸೆಟ್ಟಿಸು ಪ್ರಜೆಗಳಂ ಕಟ್ಟಿಕೊಂಡುಳ್ಳಧನ
ಮಂ ಕೊಂಡು ಬಾಧಿಸುವರು ॥ ನೆಟ್ಟನೆ ಸುಜಂಗಮಂ ಭಕ್ತರಾಚಾರ
ಮಂ। ಬಿಟ್ಟು ಮನಬಂದಂತೆ ತಮ್ಮ ತಮಗೆ ಭೂಮಿಯೊಳು । ಕೆಟ್ಟು ಧ
ರ್ಮವನು ವರ್ಜಿಸುವರೆಲೆ ಸಿದ್ಧರಾಮೇಶನೀಂ ಕೇಳೆಂದನು ॥೬೨॥
ಎಲೆ ರಾಮಕೇ ಳಿನ್ನು ದುರ್ಮಾರಿಯುರೆ ಭೂ । ತಳದಲ್ಲಿ ನರಬೇಂ
ಟೆಯಾಡುವರು ಮತ್ತವರೊ। ಳುಳಿವರವರಲಿ ಕುಲಕ್ಕೊಬ್ಬೊಬ್ಬ
ಸತ್ಯರೇಮಿಕ್ಕವರುಲಯವಪ್ಪರು ॥ ಅಳಿದಳಿಯನನುಜನಂದುಳಿ
ದೋಡಿ ಪೋಗಿರ್ದ । ಬಳಿಕ ತುರುಕರ್ಪೋಗೆ ತಾನಾಗಲಂದು ತಂ।
ಮಿಳಿಯನೊಲಿದಾಳ್ವನಾ ದೇಶದೊಳಗಲ್ಲಲ್ಲಿ ಕೊಟ್ಟಂಗಳಾಗಿಪ್ಪರ್
ವು॥೬೩॥ ಎಲೆ ಸಿದ್ಧರಾಮೇಶ ಕೇಳ್ವುದೊಲವಿಂ ಮುಂದೆ । ಕಲಿಯು
ಗದ ನಾಲ್ಕುಸಾವಿರದಾರು ನೂರರಿಂ । ಬಳಿಕಲೆಂಬತ್ತುಮೂರನೆಯ
ಸ್ವಭಾನು ಸಂವತ್ಸರದ ಮಾಘಬಹುಳ॥ ಸಲೆ ಚತುರ್ದಶಿ ಸೋಮವಾ
ರದಿಪ್ಪತ್ತೆಂಟು। ಗಳಿಗೆಯೊಳು ಕರ್ಣಾಟದೇಶಮಂ ತಾನಂದು। ತಳು
ವದೈದುವನಿರದೆ ವೀರವಸಂತಭೂಪಾಲನತಿಗೋಪ್ಯದಿಂದೆ॥೬೪॥

ಬಸವಶಿವಭಕ್ತಕ್ಷತ್ರಿಯರಲ್ಲಿಜನಿಸಿರಾ।ಬಸುವೆಂಣೆಕಾವೇರಿ ಮಧ್ಯ
ದಲ್ಲಿರುತಿರ್ಪ। ಬಸವನಾಮಾಂಕಿತದಪಟ್ಟಣಕ್ಕೈದುವಂ ನಾವಾಗ
ಲಾಸ್ಥಲದೊಳು॥ ಬಸವಡೆದವಿಪ್ರಜಾತಿಯುಬ್ಬುಗಿಸಿಪೆರವುಸಂ। ತಸ
ದಿಷಟ್ಸ್ಥಲವನುದ್ಧರಿಸುವೆನ್ನಬಳಿಕಲೀ। ಬಸವಂಣನಖಿಳಗಣಸಂ
ಕುಲಂಸಹಿತಲ್ಲಿಗೈತರುವನುತ್ಸವದೊಳು ॥೭೫॥ ನರಸಿಂಹನಂಶದ
ಳಿಯುರಸುತರುಪ್ಪಟ್ಟಿಖಾ। ತುರುಕಾಣ್ಯಕ್ಕೈದಿಬಿಡಿರಿಯುಕೋಟೆ
ಯುಂಕೆಡಪಿ। ಗುರುತಿನಿಂಪುರವಸುಧುರಸೆಗಳಂಮುರಿದಾಗ ಕಾಸಿ
ಯಾಪರಿಯಂತರಂ॥ ತುರುಕರಂಸಂಹರಿಸಲದಕೇಳ್ದುಡಿಳ್ಲಿಯಾ।
ಸುರಿತಾಳನಿಳದೆತೆಲುಗರಮೇಲೆದಂಡೆತ್ತಿ। ತೆರಳುವಂದಾಮೇಶಪರಿ
ಯಂತರಂಸಿದ್ಧರಾಮೇಶಕೇಳೆಂದನು ॥೭೬॥ ಹದಿನೆಂಟುನೇಜಯು
ದಳಾನರುಂಸಹತಮ್ರ। ಹದಿನೆಂಟುಲಕ್ಷಕುದುರೆಯುಕೂಡಿ ಕೊಂ
ಡಾಗ। ಮುದದಿಂದೆಸಕಲದೇಶಂಗಳಂಸುಡುತೆಸೇತುವೆ ಗೈದುಕೊಡೆ
ಮುರಳಿ॥ ಕದಳಿವಂಬೇಡರಿರದಲ್ಲಿಗಿಡೆಕೊಂದು। ಕುದುರೆಯುಂತೆ
ಗೆತೆಗೆದುಕಟ್ಟುತಂಬಳಿಕಲಾ। ಸದಳೆಮುಂಸುಲಿದುಸೂರಾಡಿ ಸಂಹ
ರಿಪರೆಲರಾಮೇಶಕೇಳೆಂದನು॥೭೭॥ಬಂದದಂಡಿನೊಳರ್ಧವಳಿಯ
ಲವರದಕಂಡು। ಹಿಂದವರನೆಲ್ಲರಂಸಂಹರಿಸುತಾಗಲೈ। ತಂದುಪಾ
ಳೆಯುವನಾನೆಯುಗೊಂದಿಯಲ್ಲಿಳಿದುಪರಮಸಂತೋಷದಿಂದೆ॥ಮುಂ
ದಿಪರ್ಬಾಲಿಯಾಭಂಡಾರವುಂತೆಗಿಸಿ। ತಂದುತದ್ದನವರಾಸಿಯುಮಾ
ಡಿನನಗತನ। ಗೆಂದುತಮ್ಮೊಳುತಾಪೆಕಡಿಗಾಡಿಮುಡಿವರೆಲರಾಮೇ
ಶಕೇಳೆಂದನು ॥ ೭೮ ॥ ನರಸಿಂಹನವತಾರವಳಿವುದಾಕಾಲಕ್ಕೆ। ಪೆ
ರಮೇಶನಿತ್ತನರವಂಪಿಗೇಸರಿಯಾಗೆ। ತುರಕರುಂತಮ್ಮೊಳಗೆತಾವೆ
ಕಡಿದಾಡಿಹತಮುಪ್ಪರಾಪಟ್ಟಣವನು॥ ಪರಿವಿಡಿಯೊಳೊದಗಿಕಟ್ಟಿಸಿ
ಬಳಿಕ್ಕಲ್ಲಿತಾ। ವಿರುತೆಪಟ್ಟವನಾಗಬೇಡರರುದಿಂಗಳತಿ। ಹರುಷದಿಂ
ದಾಳ್ವರೆಲರಾಮೇಶಕೇಳುದೊಡ್ಡಿತ್ತುಅತಿಸಂಭ್ರಮದೊಳು ॥೭೯॥
ಬಸವನಾಮಾಂಕಿತದಪಟ್ಟಣದೊಳಾವೀರ। ವಸಂತಗಾಗೆಪಟ್ಟವಕ
ಟ್ಟಿರದೆರಾ। ಜಸುವವಿದ್ಯಾನಗರಿಗೈತಂದುಬಾಳಿಯಾಭಂಡಾರನಾ
ಥನವನು॥ ವಶವರ್ತಿಯುಂಮಾಡಿಕೊಂಡುಬಳಿಕಲ್ಲಿಸಂ। ಸಂತಸದಿ
ಸಾಮ್ರಾಜ್ಯವುಂಪಾಲಿಸುತ್ತಿರುತಿರ್ದ। ಬಸವಡೆದಕಲ್ಯಾಣಪಟ್ಟಣವ
ನಾಗಕಟ್ಟುಪುವರಧಿಕೋತ್ಸವದೊಳು ॥೮೦॥ ತರತರದಗಳುಕೋಂ
ಟೆಕೊತ್ತಳಗಳಾಳ್ವೇರಿ। ಪರಿಪರಿಯಬಂಣದಟ್ಟಳೆಕೇತನಂಗಳಿಂ। ಸು
ರುಚಿರದಶಿಸೂರ್ಯವೀಥಿಗಳಗಡಣದಿನಗಣ್ಯಸೌಧಂಗಳಿಂದಂ॥ಧೊ

ರೆಧೊರೆಗಳೆರವು ನೆಯ ಸಾಲ್ಗಳಿಂದಲ್ಲಲ್ಲಿ ಪರಿವಿಡಿಯ ಮಂತ್ರಿಮುಖ್ಯ
ರಗೃಹಗೃಹಂಗಳಿಂ । ಪುರಜನದಭವನಂಗಳಿಂ ವೇಶ್ಯಾಲಯದ ಪಂಕ್ತಿ
ಯಿಂ ರಂಜಿಸುಂ ॥ ೭೧ ॥ ಎಸವ ತಿಪ್ಪುರಾಂತಕಾಲಯ ಮಾದಿಗುಡಿಗಳಿಂ ।
ಪೊಸತಾಗಿ ಕಟ್ಟಿಸುವರಧಿಕತರವಿಭವದಿಂ । ಬಸವಣ್ಣ ಮೊದಲಾದಸ
ಕಲಶರಣರ ಮನೆಮಠಂಗಳಂ ಕಟ್ಟಿಸುವರು ॥ ಉಸುರಲೇನಂದಿನಿಂದ
ಧಿಕ ನಾನಾಚಿತ್ರ । ಕುಶಲದಿಂ ಕಲ್ಯಾಣ ಪಟ್ಟಣದೊಳಿದೆವಿಡದೆ । ಮಿ
ಸುನಿಗೆಲಸಂಗಳಿಂದೆಲ್ಲಮಂ ಕಟ್ಟಿಸುವರೆಲೆರಾಮ ಕೇಳೆಂದನು ॥ ೭೨ ॥ ಎ
ಲೆ ಸಿದ್ಧರಾಮೇಶ ಕೇಳ್ ಸ್ವಾದೀ ಪಟ್ಟಣವ । ನಲವಿನಿಂದೆಂದಿನಿಂ ಮಿಗಿಲಾ
ಗಿ ಪೊಸಬಗೆಯ । ಚೆಲುವಿನಿಂ ಸಕಲಸಂಪದ ಸಕಲಶಿವಭಕ್ತಿ ಸಕಲಸು
ಕೃತಂಗಳಿಂಗೆ ॥ ನೆಲೆಯಾಗಿ ರಾಜಿಸಲು ವೀರವಸವಂತನತಿ । ಗೆಲವಿನಿಂ
ದಾಗ ವಿದ್ಯಾನಗರಿಯಿಂದೆಬಂ । ದಳಿಯ ಬಿಜ್ಜಳರಾಯನರಮನೆಯೊ
ಳಿರುವನಂದಧಿಕತರವಿಭವದಿಂದೆ ॥ ೭೩ ॥ ಬಸವೇಶನಾಗಲೇಳ್ನೂರೆ
ಪ್ಪತ್ತು ಮಂದಿಗಣ । ವಿಸರವುಂ ಕೂಡಿಕೊಂಡೈತಂದು ತಂತಮ್ಮ । ಮಿಸು
ಗುವರಮನೆಗಳೊಳಗೊಲಿದಿರ್ದರಾಗಲಾ ವೀರವಸವಂತರಾಯಂ ॥
ಒಸೆದು ನಮಗಾಗ ಪ್ರಸ್ಥಾನಿ ಪಟ್ಟವ ಕಟ್ಟ । ಲೆಸವುತಿರ್ಪೆಮ್ಮ ರಾಜಾಲ
ಯಕೆ ಪೋಗಿಸಂ । ತಸದಿಂದಲಿಪ್ಪ ವೆಲೆ ಸಿದ್ಧರಾಮೇಶನೀಂ ಕೇಳೆಂದು
ನಿರವಿಸಿದನು ॥ ೭೪ ॥ ಎಂದಿಂತು ಚನ್ನಬಸವೇಶ ಸಂದತಿಕರುಣ । ದಿಂದಾ
ಗ ಸಿದ್ಧರಾಮೇಶಂಗೆ ಪೇಳ್ದನಿದು । ಮುಂಪಣ್ಣಾಗಾಂತರದ ಸುಟ್ಟಿನಿಂ ಸೊ
ನ್ನಲಾಪುರದೊಳೈಕ್ಯಸ್ಥಲದೆ ॥ ನಿಂದು ನಿಜಸುಖಸಮಾಧಿಯೊಳಿರೆ
ನೆಕೇಳ್ದು ಸಾ । ನಂದದಿಂದೆದ್ದು ಸಾಷ್ಟಾಂಗ ಪಣಮಿತನಾಗಿ । ಮುಂದಿ
ರ್ದ ಬಸವೇಶ ಮೊದಲಾದ ಶರಣಗೆ ನಮಿಸಿದಂ ಭಕ್ತಿಯಿಂದೆ ॥ ೭೫ ॥
ಬಸವ ದಂಡಾಧೀಶ ಮೊದಲಾದ ಶರಣಗಣ । ವಿಸರವಾ ಸಿದ್ಧರಾಮೇಶಂ
ಗೆನಮಿಸೆಸಂ । ತಸದಿಂದೆಬೀಳ್ಕೊಂಡು ಸೊನ್ನಲಾಪುರಕೈದಿ ಶಿವಸ
ಮಾಧಿಯೊಳಿರ್ದನು ॥ ಎಸವ ಕಲ್ಯಾಣ ಪಟ್ಟಣದೊಳೆಂದಾ ಚನ್ನ । ಬ
ಸವೇಶನುಂ ಬಸವದಂಡೇಶ ಮೊದಲಾದ । ಜಸವಡೆದ ಶರಣ ಸಂಕುಲ
ಮಾಗಿ ಶಿವತತ್ವಗೋಷ್ಠಿಯಿಂ ಸುಖಮಿರ್ದರು ॥ ೭೬ ॥ ಶಾಲಿವಾಹನಶ
ಕದ ಸಾಸಿರದೈನೂರ । ಮೇಲಿದೇಳನೆಯ ತಾರಣಸಂವತ್ಸರದ ।
ಕಾಲದೊಳಗೆಸವ ಶ್ರಾವಣ ಬಹುಳದಶಮಿಯಾಗುರುವಾರ ಕೃತ್ತಿನಾಂಗ
ದಿಂ । ಪೇಳಿ ಮುಗಿಸಿದ ಪಂಡಿತಾಗ್ರಣಿ ವಿರೂಪಾಕ್ಷ । ಲೀಲೆಯಿಂ ಚನ್ನ
ಬಸವೇಶ ಪೌರಾಣಮಿದ । ನಾಲಿಸುವ ಶರಣರ್ಗೆ ಸಕಲಪದವಿಯನೀ
ವ ಚನ್ನಬಸವೇಶನೊಲಿದು ॥ ೭೭ ॥ ಇದು ಸಕಲವೀರಮಾಹೇಶ್ವರರಸ

ದ್ವಿಮಲ| ಹೃದಯಾಬ್ಜಮಿತ್ರನುರುಷಟ್ಸ್ಥಲಬ್ರಹ್ಮವೆಂ| ಬುಧನಿವರ್ಧನಸೋಮನೆನಿಪಗುರುಸಿದ್ಧವೀರೇಶ್ವರನಕರಜಾತನು ॥ ಸಜ್ಜನುಲ ಜ್ಞಾನಿಸಕಲಾಗಮಪುರಾಣಕೋ| ವಿದನಾವಿರೂಪಾಕ್ಷಪಂಡಿತಾರಾಧ್ಯನತಿ | ಮುದದೆಪೇಳ್ದ ಚೆನ್ನಬಸವಪುರಾಣಸತ್ಕಥೆಯೊಳೈದನೆಯಕಾಂಡಂ ॥೭೮॥ ಇಂತೆಸವ ಚೆನ್ನಬಸವೇಶ್ವರಪುರಾಣಮಂ| ಸಂತಸದಿಂ ಬರೆದೋದಿದರ್ಗೆ ಹರ್ಷದಿಂ ಸಾ| ದ್ಯಂತಮಂ ಬಿಡದೆ ಪೇಳ್ದರ್ಗೆ ಪಠಿಸಿದವರ್ಗೆ ಭಕ್ತಿಯಿಂ ಕೇಳ್ದವರ್ಗೆ॥ ಸಂತತಂ ಸಕಲಸುಖಮುಂ ಸಕಲಭೋಗಮುನ | ನಂತಸೌಭಾಗ್ಯಮಂ ಕೊಟ್ಟು ರಕ್ಷಿಸುವನು| ಕಂತುಹರನಪರಾವತಾರನೆನಿಸುವ ಚೆನ್ನಬಸವೇಶನಕ್ಕರಿಂದಂ ॥೭೯॥

ಐದನೆಯಕಾಂಡದಲ್ಲಿ ೧೦ನೇಸಂಧಿ ಮುಗಿದುದು.

ಅಂತು ಸಂಧಿ ೭೪ಕ್ಕಂ ಪದ ೨೮೯೮ಕ್ಕಂ ಮಂಗಳ.

---

ಚೆನ್ನಬಸವೇಶ್ವರ ಪುರಾಣವು

ಸಂಪೂರ್ಣವಾಯಿತು.

ಶಿವಮಸ್ತು.

